॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

# ಧರ್ಮಪಿತ
# ವಿಶ್ವಗುರು ಬಸವಣ್ಣನವರು

[೧೧೦೫ - ೧೧೬೭]

ಲೇಖಕರು

**ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**

ಎಂ.ಎ.(ತತ್ವಜ್ಞಾನ),ಎಲ್ಎಲ್.ಬಿ.(ಸ್ಪೇಶಲ್),
ಎಂ.ಎ. (ಕನ್ನಡ), ಎಂ.ಎ.(ಹಿಂದಿ),
ಸಿ.ವಾಯ್.ಇಡಿ. (ಯೋಗ ಶಿಕ್ಷಣ)

ಗೌ॥ ಸಂಪಾದಕರು, 'ಬಸವಬೆಳಗು' ಪತ್ರಿಕೆ, ರಾಮದುರ್ಗ..




೨೦೨೦

ಜಗಜ್ಯೋತಿ ಬಸವೇಶ್ವರ ಅನುಭಾವಪೀಠ

ರಾಮದುರ್ಗ–೫೯೧ ೧೨೩. ಜಿ॥ ಬೆಳಗಾವಿ

ಧರ್ಮಪಿತ ವಿಶ್ವಗುರು ಬಸವಣ್ಣನ[illegible]


ಲೇಖಕರು : ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)

ಎಂ.ಎ.(ತತ್ವಜ್ಞಾನ),ಎಲ್ಎಲ್.ಬಿ.(ಸ್ಪೇಶಲ್),
ಎಂ.ಎ. (ಕನ್ನಡ), ಎಂ.ಎ.(ಹಿಂದಿ),
ಸಿ.ವಾಯ್.ಇಡಿ. (ಯೋಗ ಶಿಕ್ಷಣ)

ಗೌ॥ ಸಂಪಾದಕರು, ಬಸವ ಬೆಳಗು ಪತ್ರಿಕೆ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ



© ಲೇಖಕರವು



ಪ್ರಕಾಶಕರು : ಜಗಜ್ಯೋತಿ ಬಸವೇಶ್ವರ ಅನುಭಾವಪೀಠ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ

ಪ್ರಥಮ ಮುದ್ರಣ : ೨೦೧೬
ದ್ವಿತೀಯ ಮುದ್ರಣ : ೨೦೨೦

ಪ್ರತಿಗಳು : ೧೦೦೦

ಪುಟಗಳು : vi + ೯೦ = ೯೬

ಪೇಪರ ಬಳಸಿದ್ದು : ಮ್ಯಾಪ್ಲಿಥೋ ಮತ್ತು ಆರ್ಟ ಕಾರ್ಡ ಕವ್ಹರ ೨೫೦ ಜಿ.ಎಸ್.ಎಂ.

ಬೆಲೆ : ಐವತ್ತು ರೂಪಾಯಿಗಳು ₹ ೫೦/-

ಮುಖಪುಟ ವಿನ್ಯಾಸ : ಶ್ರೀ ರವೀಂದ್ರ ವಿಶ್ವಜ್ಞ, ಧಾರವಾಡ.

ಮುದ್ರಕರು : ಶ್ರೀ ಹುಚ್ಚೇಶ್ವರ ಆಫ್‌ಸೆಟ್ ಪ್ರಿಂಟರ್ಸ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ
ಮೊಬೈಲ್ : ೯೦೩೬೬೬೬೪೨

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

## ಲೇಖಕರ ನಿವೇದನೆ

ಸಕಲಜೀವಾತ್ಮರಿಗೆ ಲೇಸನೇ ಬಯಸಿದ, ಮಾನವಕುಲದ ಕಲ್ಯಾಣಕ್ಕಾಗಿ ಹಗಲಿರುಳು ಶ್ರಮಿಸಿದ ಮಹಾಮಾನವತಾವಾದಿ ವಿಶ್ವಗುರು ಬಸವಣ್ಣನವರ ಕುರಿತು, ಅವರ ವಚನಗಳ ಕುರಿತು ಅಧ್ಯಯನ-ಚಿಂತನ ಮಾಡಿದಂತೆಲ್ಲ ಹೊಸ ಹೊಸ ವಿಚಾರಗಳು ಹೊರಹೊಮ್ಮುತ್ತಲೇ ಇರುತ್ತವೆ.

ಬಸವಣ್ಣನವರು ಯಾವುದೋ ಒಂದು ಜಾತಿ, ಮತ, ಪಂಥ, ಪಂಗಡ, ಕುಲ, ಕಾಲ, ದೇಶ, ಭಾಷೆಗೆ ಸೀಮಿತರಾದವರಲ್ಲ; ಅವರು ಇಡೀ ವಿಶ್ವಕ್ಕೆ ಸಂಬಂಧ-ಪಟ್ಟ ಮಹಾಗುರು, ಸದ್ಗುರು, ಜಗದ್ಗುರು, ವಿಶ್ವಗುರುವಾಗಿದ್ದಾರೆ.

ಬಸವಣ್ಣನವರು ಯಾವುದೋ ಒಂದು ಗುಡಿಸಲು, ಮನೆ, ಗುರುಮನೆ, ಅರಮನೆ, ಆಶ್ರಮ, ಮಠ, ಪೀಠಗಳಿಗೆ ಸೀಮಿತರಾದವರಲ್ಲ; ಅವರು ಇಡೀ ವಿಶ್ವವನ್ನೇ ಗರ್ಭೀಕರಿಸಿಕೊಂಡಿರುವ ಮರ್ತ್ಯಲೋಕದ ಮಹಾಮನೆಗೆ ಸಂಬಂಧಿಸಿದ ಮಹಾಮಾನವತಾವಾದಿಯಾಗಿದ್ದಾರೆ.

ಬಸವಣ್ಣನವರ ಧರ್ಮ ಯಾವುದೋ ಒಂದು ಸಮಾಜ, ಜನಾಂಗಕ್ಕೆ ಸೀಮಿತವಾದುದಲ್ಲ; ವಿಪ್ರಮೊದಲು ಅಂತ್ಯಜ ಕಡೆಯಾಗಿ ಎಲ್ಲ ಸ್ತ್ರೀ-ಪುರುಷರಿಗೆ ಸಮತೆ-ಸ್ವಾತಂತ್ರ್ಯ-ಬಂಧುತ್ವದ ಸಂಸ್ಕಾರ ನೀಡಿದ ವಿಶ್ವಧರ್ಮವಾಗಿದ್ದು ಬಸವಣ್ಣನವರು ನಿಜಾರ್ಥದಲ್ಲಿ ಧರ್ಮಪಿತರಾಗಿದ್ದಾರೆ.

ಬಸವಜ್ಯೋತಿಯು ಮರ್ತ್ಯಲೋಕದ ಮಾನವರ ಮನದ ಅಜ್ಞಾನ ಕತ್ತಲೆಯ ಕಳೆದು, ಅವರ ಮರೆವನ್ನು ತೊಡೆದು, ಅವರನ್ನೆಲ್ಲಾ ಅರಿವಿನ ಶರಣರನ್ನಾಗಿಸುವ ಚಿಜ್ಯೋತಿ, ಮಹಾಜ್ಯೋತಿ, ಪರಂಜ್ಯೋತಿಯಾಗಿದೆ.

ಇಂತಪ್ಪ ಧರ್ಮಗುರುವಿನ ಜೀವನ-ದರ್ಶನ ಮಾಡಿಕೊಳ್ಳಲೋಸುಗ ರಚಿತವಾದ ಕೃತಿ ಇದಾಗಿದೆ. ಬಸವಣ್ಣನವರ ವಚನಗಳನ್ನು ಓದಿ, ಅರಿತು, ಆಚರಣೆಗೆ ತಂದಾಗ ಮಾತ್ರ ಪ್ರತಿಯೊಬ್ಬರ ಜೀವನವು ಬಸವಮಯವಾಗುತ್ತದೆ. ಸರ್ವರೂ ಬಸವಸ್ವರೂಪಿಗಳಾಗಲೆಂಬುದೇ ಅಂತರಂಗದ ನಿವೇದನೆಯಾಗಿದೆ.

ಶರಣು-ಶರಣಾರ್ಥಿಗಳು.

'ಬಸವತನಯ'

ಸಿದ್ಧಣ್ಣ ಲಂಗೋಟಿ

# ಪರಿವಿಡಿ

## ವಿಶ್ವಗುರು ಬಸವಣ್ಣನವರು

# ೧. ಬಸವಪೂರ್ವದ ಪರಿಸ್ಥಿತಿ

## i) ಪೀಠಿಕೆ :

ವಿಶ್ವದ ವಿಭೂತಿ ಪುರುಷರಲ್ಲಿ, ಜಾಗತಿಕ ಧರ್ಮಸ್ಥಾಪಕರಲ್ಲಿ, ಭಾರತದ ದಾರ್ಶನಿಕರಲ್ಲಿ ವಿಶ್ವಗುರು ಬಸವಣ್ಣನವರು ಜಗಜ್ಯೋತಿಯಾಗಿ ಬೆಳಗುತ್ತಿದ್ದಾರೆ. ಪ್ರಪಂಚದ ಮೊಟ್ಟ ಮೊದಲ ಪ್ರಜಾಪ್ರಭುತ್ವ ಮಾದರಿಯ ಸಮಾಜೋ-ಧಾರ್ಮಿಕ ಪಾರ್ಲಿಮೆಂಟ್ ಎಂದೆನಿಸಿದ ವಿನೂತನವಾದ ' ಅನುಭವ ಮಂಟಪ' ಎಂಬ ಮಹಾನ್ ಸಂಸ್ಥೆಯನ್ನು ಹುಟ್ಟು ಹಾಕಿ ಸಮತೆ-ಸ್ವಾತಂತ್ರ್ಯ-ಬಂಧುತ್ವ-ಮಾನವೀಯತೆ ಎಂಬ ನಾಲ್ಕು ಸ್ತಂಭಗಳ ಮೇಲೆ ಇಷ್ಟಲಿಂಗ ಪರಂಪರೆಯ **'ಲಿಂಗಾಯತ ಧರ್ಮ'**ವನ್ನು ಸ್ಥಾಪಿಸಿದರು. ಬಸವಗುರು ಪ್ರಣೀತ ಲಿಂಗಾಯತಧರ್ಮವು ವಿಶ್ವಧರ್ಮದ ಎಲ್ಲ ಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು 'ವಿಶ್ವಬಸವ ಧರ್ಮ' ವೆಂದು ದೇಶ-ವಿದೇಶಗಳ ವಿದ್ವಾಂಸರು,ಪಂಡಿತರು, ಜ್ಞಾನಿಗಳು, ವಿಮರ್ಶಕರು, ಚಿಂತಕರು ಕರೆಯುತ್ತಿದ್ದಾರೆ.

ಭಾರತದ ಪ್ರಪ್ರಥಮ ವ್ಯೋಮಕಾಯಸಿದ್ಧನೆಂದು ಖ್ಯಾತಿಪಡೆದ ಮಹಾನ್ ಯೋಗಿ, ವೈರಾಗ್ಯವಿಭು ಅಲ್ಲಮಪ್ರಭುದೇವರು- ' ಮಹಾಮಹಿಮ ಸಂಗನ ಬಸವಣ್ಣನು ಎನಗೆಯೂ ಗುರು, ನಿನಗೆಯೂ ಗುರು, ಜಗವೆಲ್ಲಕ್ಕೆಯೂ ಗುರು ಕಾಣಾ ಗುಹೇಶ್ವರ' ಎಂದು ಸ್ತುತಿಸಿರುವುದನ್ನು ಕಂಡಾಗ, ಗುರು ಬಸವಣ್ಣನವರ ಬಹುಮುಖ ಪ್ರತಿಭೆಯ ವ್ಯಕ್ತಿತ್ವದ ದರ್ಶನವಾಗುತ್ತದೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸಿದ, ಮಾನವಕುಲದ ಕಲ್ಯಾಣಕ್ಕಾಗಿ ಹಗಲಿರುಳು ಶ್ರಮಿಸಿದ ವಿಶ್ವದ ಯುಗ ಪುರುಷರು, ಬಸವಣ್ಣನವರೊಬ್ಬ ಪರಮದಯಾಮೂರ್ತಿ, ಮಹಾಮಾನವತಾವಾದಿ, ಸ್ವತಂತ್ರ ವಿಚಾರವಾದಿ, ಸಮಾಜವಾದಿ, ಸಮತಾವಾದಿ, ಶ್ರೇಷ್ಠ ಅರ್ಥಶಾಸ್ತ್ರಜ್ಞ, ದೀನ-ದಲಿತೋದ್ಧಾರಕ, ಸ್ತ್ರೀಕುಲೋದ್ಧಾರಕ, ವ್ಯಷ್ಠಿ-ಸಮಷ್ಠಿಯ ಕಲ್ಯಾಣಕ್ಕಾಗಿ ಹೋರಾಡಿದ ಮಹಾನ್ ಕ್ರಾಂತಿಕಾರಿ, ಹೊಸ ಧರ್ಮ, ಸಮಾಜ, ಸಂಸ್ಕೃತಿ-ಸಾಹಿತ್ಯದ ನಿರ್ಮಾಪಕ, ಪ್ರಗತಿಪರ ಯೋಜನೆಗಳ ರೂವಾರಿ, ನುಡಿದಂತೆ ನಡೆದ, ನಡೆಯಲ್ಲಿ ನುಡಿಯ ಪೂರೈಸಿದ ಪ್ರಾಮಾಣಿಕ ಬದುಕಿನ ಪಾರದರ್ಶಕ ವ್ಯಕ್ತಿತ್ವದ ಮಹಾನ್ ಚೇತನರಾಗಿದ್ದರು.

ಇಂತಹ ಮಹಾಚೇತನದ ಜೀವನ-ಸಾಧನೆಗಳನ್ನು ಅರಿಯಬೇಕಾದರೆ, ಬಸವಪೂರ್ವ ಕಾಲದ ಭಾರತೀಯ ಧಾರ್ಮಿಕ ಸಾಮಾಜಿಕ, ರಾಜಕೀಯ ಪರಿಸ್ಥಿತಿಯ ಅವಲೋಕನ ಮಾಡಬೇಕಾಗುತ್ತದೆ.

## ii) ಧಾರ್ಮಿಕ ಪರಿಸ್ಥಿತಿ :

ಬಸವಣ್ಣನವರ ಜನನದ ಪೂರ್ವದಲ್ಲಿ ಜಂಬೂದ್ವೀಪವೆನಿಸಿದ್ದ ಭಾರತದೇಶದ ಧಾರ್ಮಿಕ ಪರಿಸ್ಥಿತಿಯು ಹದಗೆಟ್ಟಿತ್ತು. ಧರ್ಮ–ದೇವರು–ದೇವಾಲಯಗಳು ಸ್ವಾರ್ಥಿ ಪೂಜಾರಿ–ಪುರೋಹಿತರ ಕಪಿಮುಷ್ಟಿಯಲ್ಲಿ ಸಿಲುಕಿ, ಮೂಢ ಸಂಪ್ರದಾಯ, ಕರ್ಮಠ ಆಚರಣೆಗಳ, ಶೋಷಣೆಯ ಕೇಂದ್ರಗಳಾಗಿ ಮಾರ್ಪಾಟಾಗಿದ್ದವು. ಭಾರತದ ಅತೀ ಪ್ರಾಚೀನ ಧರ್ಮವೆನಿಸಿದ್ದ **ಶೈವ ಧರ್ಮವು** ಕಾಲಾನಂತರದಲ್ಲಿ ಶಿವ–ಪಾರ್ವತಿಯರ ಹೆಸರಿನಲ್ಲಿ ಅನುಯಾಯಿಗಳು ವಿಭಜಿತರಾಗಿ 'ಶಿವ ಸರ್ವೋತ್ತಮತ್ವ'ವೆಂದು ಶಿವೋಪಾಸಕರು ಹಾಗೂ ' ಶಕ್ತಿ ಸರ್ವೋತ್ತಮತ್ವವೆಂದು ಶಕ್ತಿ ಉಪಾಸಕರು ಸಂಘರ್ಷಕ್ಕಿಳಿದು ಶೈವ ಹಾಗೂ ಶಾಕ್ತ ಪಂಥಗಳನ್ನು ಹುಟ್ಟು ಹಾಕಿಕೊಂಡು ವಿಭಿನ್ನ ಮಾರ್ಗಗಳಲ್ಲಿ ಸಾಗತೊಡಗಿದ್ದರು ಶೈವ ಪಂಥವೂ ಮತ್ತೆ ಮತ್ತೆ ಉಪಪಂಥಗಳಲ್ಲಿ ವಿಭಜನೆ ಹೊಂದುತ್ತಾ ಪಾಶುಪತ, ಲಕುಲೀಶ, ಕಾಪಾಲಿಕ, ಕಾಳಾಮುಖ ಎಂಬ ಹೆಸರಿನಲ್ಲಿ ಉಗ್ರ ಆಚರಣೆ, ವಾಮ ಮಾರ್ಗಗಳಿಗೆ ಇಳಿದಿದ್ದವು. ಶಾಕ್ತರೂ ಕೂಡ ಪಾರ್ವತಿಯ ಸೌಮ್ಯ–ಸಾತ್ವಿಕ ಉಪಾಸನೆಯಿಂದ ದೂರಾಗಿ, ಭದ್ರಕಾಳಿ, ರೌದ್ರಕಾಳಿಯ ರೂಪಗಳನ್ನು ಕಲ್ಪಿಸಿಕೊಂಡು, ಆರಾಧಿಸತೊಡಗಿದ್ದರು. ಶಕ್ತಿ ದೇವತೆಗಳಿಗೆ ಪ್ರಾಣಿಬಲಿ, ನರಬಲಿ, ಕನ್ಯಾಬಲಿ ಮುಂತಾದ ಬಲಿಗಳನ್ನು ಕೊಡುವ ಹಿಂಸಾಮಾರ್ಗವನ್ನು ಆಚರಿಸತೊಡಗಿದ್ದರು. ಅಮಾನುಷವಾಗಿ ಮಾಟ–ಮಂತ್ರ–ತಂತ್ರಗಳ ಜಾಲದಲ್ಲಿ ಸಿಲುಕಿ ಕ್ಷುದ್ರ ಸಿದ್ಧಿಗಳ ಸಾಧನೆಗಾಗಿ, ಸ್ಮಶಾನಗಳಲ್ಲಿ ಭೀಭತ್ಸ–ಭಯಾನಕ ಆಚರಣೆಗಳಿಗೂ ತೊಡಗಿದ್ದರು. ತಾಂತ್ರಿಕರು ತಮ್ಮ ತಾಂತ್ರಿಕ ವಾಮ ಮಾರ್ಗದಲ್ಲಿ, ಮದ್ಯ, ಮಾಂಸ, ಮೈಥುನ, ಮತ್ಸ್ಯ, ಮುದ್ರ ಎಂಬ ಪಂಚ 'ಮ'ಕಾರಗಳ ಭೋಗದಲ್ಲಿ, ಉನ್ಮಾದ ಸ್ಥಿತಿಯಲ್ಲಿ ವರ್ತಿಸುತ್ತಿದ್ದರು.

**ವೈದಿಕ ಧರ್ಮ** ಪರಂಪರೆಯು ವೇದೋಪನಿಷತ್ತುಗಳ ಜ್ಞಾನ ಮಾರ್ಗವನ್ನು ಕಡೆಗಣಿಸಿ, ಕರ್ಮಠ ಕರ್ಮಕಾಂಡದ ಬೆನ್ನುಹತ್ತಿ ಯಜ್ಞ–ಯಾಗ–ಹೋಮ–ಹವನಗಳ ಹೆಸರಿನಲ್ಲಿ ಪ್ರಾಣಿಬಲಿ ಮುಂತಾದ ಹಿಂಸಾಮೂಲದ ಕರ್ಮಾಚರಣೆಗೆ ಆದ್ಯತೆ ನೀಡತೊಡಗಿತ್ತು. ದ್ರಾವಿಡ ಆರ್ಯರ ಸಂಘರ್ಷ, ಅನಂತರದ ಕಾಲಘಟ್ಟದಲ್ಲಿ ಸಮ್ಮಿಳಿತವಾಗಿ ಬಹುದೇವೋಪಾಸನೆ, ಕ್ಷುದ್ರ ದೇವತೆಗಳ ಪೂಜೆ–ಪುನಸ್ಕಾರಗಳು, ಯಜ್ಞ–ಬಲಿಗಳು, ನಿರಂತರವಾಗಿ ಮುಂದುವರೆದಿದ್ದವು.

ಧರ್ಮ–ದೇವರು–ದೇವಾಲಯುಗಳ ಹೆಸರಿನಲ್ಲಿ ಅಭಿಷೇಕಾದಿ ಆಚರಣೆಗಳು, ಸಹಸ್ರ ಬಿಲ್ವಾರ್ಚನೆ–ಲಕ್ಷ ಬಿಲ್ವಾರ್ಚನೆ–ಕೋಟಿ ಬಿಲ್ವಾರ್ಚನೆಗಳು, ಪೂರ್ವಜನ್ಮ–ಪುನರ್‌ಜನ್ಮ–ಕರ್ಮಸಿದ್ಧಾಂತಗಳು, ಪಾಪ–ಪುಣ್ಯ, ಸ್ವರ್ಗ–ನರಕ, ದೇವಲೋಕ–ಮರ್ತ್ಯಲೋಕ, ಕೈಲಾಸ–ವೈಕುಂಠ, ಮಂತ್ರ–ತಂತ್ರ, ಜ್ಯೋತಿಷ್ಯ–

ಪಂಚಾಂಗ, ಶುಭ-ಅಶುಭ, ರಾಹುಕಾಲ-ಯಮಗಂಡಕಾಲ, ವ್ರತ-ನೇಮ, ದೈವವಾದ-ಹಣೆಬರಹ, ನೂರೆಂಟು ಹರಕೆಗಳು, ಪ್ರಾಯಶ್ಚಿತ್ತಗಳು, ದೇವದಾಸಿ ಹೆಸರಿನಲ್ಲಿ ಧಾರ್ಮಿಕ ವ್ಯವಸ್ಥೆಯಲ್ಲಿ ಅಂದರೆ ದೇವಾಲಯಗಳಲ್ಲಿ ಆಂತರಿಕವಾಗಿ ವೇಶ್ಯಾವೃತ್ತಿಯ ಅನಾಚಾರಗಳು ಎಲ್ಲೆಡೆಯಲ್ಲಿ ನಿರಾತಂಕವಾಗಿ ಸಾಗಿದ್ದವು.

ಇನ್ನೊಂದೆಡೆ ನಾಸ್ತಿಕ ಮತವಾಗಿ ಜನ್ಮತಾಳಿದ್ದ **ಚಾರ್ವಾಕರು** ವೈಚಾರಿಕತೆಯನ್ನು ಮರೆತು, ಸಾಲಮಾಡಿಯಾದರೂ ತುಪ್ಪ ಕುಡಿಯಬೇಕು 'ಋಣಂ ಕೃತ್ವಾ ಘೃತಂ ಪಿಬೇತ್' ಎಂಬ ವಿಕೃತ ಭೋಗಕ್ಕೆ ತುತ್ತಾಗಿದ್ದರು.

ಶೈವ-ಹಾಗೂ ವೈದಿಕ ಮತಗಳ ಬಹುದೇವೋಪಾಸನೆ, ಯಜ್ಞ-ಯಾಗ, ಪ್ರಾಣಿ ಹಿಂಸೆ ಮುಂತಾದವುಗಳ ಅತಿರೇಕ ಆಚರಣೆಗಳಿಂದ ರೋಸಿ ಹೋಗಿ ಅಹಿಂಸೆಯೇ ಪರಮಧರ್ಮವೆಂದು ಪ್ರತಿವಾದಿಸಿದ **ಜೈನಧರ್ಮವು** ಕಾಲಾ-ನಂತರದಲ್ಲಿ ಶ್ವೇತಾಂಬರ, ದಿಗಂಬರ ಶಾಖೆಗಳಾಗಿ ಮಾರ್ಪಟ್ಟು ಕಟ್ಟು-ನಿಟ್ಟಿನ ವ್ರತ-ಆಚರಣೆಗಳಿಂದ ಜನಸಾಮಾನ್ಯರಿಗೆ ತಲುಪದೇ ಅಂತರ ಕಾಯ್ದುಕೊಂಡಿತ್ತು. ಮಹಿಳೆಯು ಮೋಕ್ಷ (ನಿರ್ವಾಣ) ಹೊಂದಬೇಕಾದರೆ ಪುನರ್ಜನ್ಮದಲ್ಲಿ ಪುರುಷನಾಗಿ ಜನಿಸಿ ಸಾಧನೆಗೈಯಬೇಕು ಎಂದು ಸಿದ್ಧಾಂತ ಮಾಡಿದ್ದರಿಂದ ಸರ್ವರಿಗೂ ಸಮಾನತೆಯ ಆದರ್ಶಮತವಾಗಿ ಉಳಿಯಲಿಲ್ಲ, ಬೆಳೆಯಲಿಲ್ಲ.

ಅದೇ ಕಾಲಕ್ಕೆ ಅಂದರೆ ಕ್ರಿ.ಪೂ.೬ನೇ ಶತಮಾನದಲ್ಲಿ ಉದಿಸಿದ **ಬೌದ್ಧ ಧರ್ಮವೂ** ಸಹ ಸನಾತನ ದೇವತೆಗಳ ಹಾಗೂ ಯಜ್ಞ-ಯಾಗಾದಿಗಳನ್ನು ತಿರಸ್ಕರಿಸಿ ಮಾನವ ಜೀವನದಲ್ಲಿರುವ ದುಃಖ ನಿವಾರಣೆಗಾಗಿ ನಾಲ್ಕು ಸತ್ಯಗಳನ್ನು ಕಂಡುಕೊಂಡು, ಅಷ್ಟಾಂಗ ಮಾರ್ಗವನ್ನು ರೂಪಿಸಿ ರಾಜಾಶ್ರಯ ಪಡೆದು ಭಾರತದ ಒಳ-ಹೊರಗೆಲ್ಲ ವ್ಯಾಪಿಸಿತು. ಕಾಲಾನಂತರದಲ್ಲಿ ಅದೂ ಕೂಡಾ ಹೀನಯಾನ ಮತ್ತು ಮಹಾಯಾನ ಎಂಬ ಶಾಖೆಗಳಲ್ಲಿ ವಿಭಜಿತವಾಗಿ ಹೋಯಿತು. ಅದೂ ಸಾಮಾನ್ಯ ಜನತೆಯನ್ನು ಸ್ಪರ್ಶಿಸಲಿಲ್ಲ. ಕರ್ಮಠ ಸಂಪ್ರದಾಯವಾದಿ ಮೂಲ-ಭೂತವಾದಿಗಳು ವಿರೋಧಿಸಿದ್ದರಿಂದ ಬೆಳೆಯಲಿಕ್ಕೆ ಅವಕಾಶವಾಗಲಿಲ್ಲ.

ವೇದೋಪನಿಷತ್ತುಗಳ ಜ್ಞಾನದ ಬಳಿವಿಡಿದು ಬಂದಂತಹ ಗೌತಮನ ನ್ಯಾಯದರ್ಶನ, ಕಣಾದನ ವೈಶೇಷಿಕ ದರ್ಶನ, ಕಪಿಲನ ಸಾಂಖ್ಯದರ್ಶನ, ಪತಂಜಲಿಯ ಯೋಗದರ್ಶನ, ಜೈಮಿನಿಯ ಪೂರ್ವಮೀಮಾಂಸಾ ದರ್ಶನ ಹಾಗೂ ಬಾದರಾಯಣ (ವ್ಯಾಸ)ನ ಉತ್ತರ ಮೀಮಾಂಸಾ ದರ್ಶನ ಅರ್ಥಾತ್ ವೇದಾಂತ ದರ್ಶನಗಳೆಂಬ **ಷಡ್ ದರ್ಶನಗಳು** ಪಂಡಿತೋತ್ತಮರ ಬೌದ್ಧಿಕ ಚಿಂತನೆಯ ಹಂತಕ್ಕೆ ಸೀಮಿತವಾದವು. ಬ್ರಹ್ಮಸೂತ್ರಗಳಿಗೆ, ಪ್ರಸ್ಥಾನತ್ರಯಗಳಿಗೆ ಭಾಷ್ಯೆ ಬರೆದ ಶಂಕರ- ರಾಮಾನುಜಾಚಾರ್ಯರಂತಹ ಆಚಾರ್ಯರೂ ಸಹ

ತರ್ಕಜ್ಞಾನದ ನೆಲೆಯಲ್ಲಿ ಅದ್ವೈತ- ವಿಶಿಷ್ಟಾದ್ವೈತಗಳ ಮಂಡನೆ-ನಿರಸನಗಳಲ್ಲಿ ಕಾಲ ಕಳೆದರು.

ಹೀಗಾಗಿ ಪ್ರಾಚೀನ ಶೈವ, ವೈಷ್ಣವ ಪರಂಪರೆಗಳು ಕರ್ಮಾಚರಣೆಗಳಲ್ಲಿ ನಿರತವಾದರೆ, ದಕ್ಷಿಣಭಾರತದ ೬೩ ಪುರಾತನರು ಮುಗ್ಧ ಹಾಗೂ ಮೂಢ ಶಿವಭಕ್ತಿಯ ಆರಾಧನೆಯಲ್ಲಿ ನಿರತರಾದದ್ದು, ಸಿರಿಯಾಳ, ಚಂಗಳೆಯರು ಮಗನನನ್ನು ಕಡಿದು ಮಾಂಸದಡಿಗೆ ಮಾಡಿ ಶಿವನಿಗೆ ಅರ್ಪಿಸಿದ್ದು, ಬೇಡರ ಕಣ್ಣಪ್ಪ ಸ್ಥಾವರ ಶಿವಲಿಂಗಕ್ಕೆ ಕಣ್ಣುಕಿತ್ತು ಅರ್ಪಿಸಿದ್ದು, ಸಿಂಧೂಬಲ್ಲಾಳ ತನ್ನ ಪತ್ನಿಯನ್ನೇ ನೀಡಿದ್ದು ಇವೆಲ್ಲ ಭಯಾನಕ ಕರ್ಮಾಚರಣೆಗಳಾಗಿದ್ದವು. (ಮುನ್ನಿನವರು ಹೋದ ದಾರಿ ಭಯಕಾಣಿರಣ್ಣ ! ಎಂದು ಬಸವಣ್ಣನವರು ಎಚ್ಚರಿಸಿದ್ದನ್ನು ನಂತರದಲ್ಲಿ ಕಾಣುತ್ತೇವೆ).

### iii) ಸಾಮಾಜಿಕ ಪರಿಸ್ಥಿತಿ :

ಭಾರತೀಯ ಕುಟುಂಬ-ಸಮಾಜಗಳು ವರ್ಣಾಶ್ರಮ ಪದ್ಧತಿಯ ಧಾರ್ಮಿಕ ನೇತಾರರಿಂದಲೇ ಮುನ್ನಡೆಸಲ್ಪಡುತ್ತಿದ್ದವು. ದ್ರಾವಿಡರ ಕಾಲದ ಶೈವಧರ್ಮದಲ್ಲಿ ಆಗಮೋಕ್ತ ವರ್ಣ-ಜಾತಿ ವ್ಯವಸ್ಥೆಯು, ಆರ್ಯರ ಕಾಲದ ವೈದಿಕಧರ್ಮದಲ್ಲಿ ವೇದೋಕ್ತ ವರ್ಣ-ಜಾತಿ ಪದ್ಧತಿಗಳ ವ್ಯವಸ್ಥೆಯು ಅನಂತರದ ವೇದಾಗಮಗಳ, ಶ್ರುತಿ-ಸ್ಮೃತಿಗಳು ಸಮ್ಮಿಳಿತಗೊಂಡ ನಂತರದಲ್ಲಿ ವರ್ಣಭೇದ- ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ವರ್ಗಭೇದ- ಬಡವಬಲ್ಲಿದ, ಆಶ್ರಮಭೇದ- ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ತ, ಸನ್ಯಾಸ, ಲಿಂಗಭೇದ- ಸ್ತ್ರೀ-ಪುರುಷ, ಜಾತಿಭೇದ-ನೂರೆಂಟು ಕುಲಜಾತಿಗಳಲ್ಲಿ(ಅಸಂಖ್ಯ-ಅಂದಾಜು ಆರು ಸಾವಿರ ಮೇಲ್ಪಟ್ಟು) ಈ ದೇಶದ ಸಮಾಜ ವ್ಯವಸ್ಥೆಯು ರೂಪುತಾಳಿತ್ತು. ಚಾತುರ್‌ವರ್ಣ ವ್ಯವಸ್ಥೆಯ ಆಚೆಗೆ ಅಸ್ಪೃಶ್ಯ-ದಲಿತ ಪಂಚಮವರ್ಣಿಯ ಎಂಬ ವ್ಯವಸ್ಥೆಯನ್ನು ಮೇಲ್ಜಾತಿಯ ಕರ್ಮಠರು ಹುಟ್ಟು ಹಾಕಿದರು. **ಪಂಚಮ ವರ್ಣ**ದಲ್ಲಿ ಅಂದಿನ ಕಾಲದ ಹೊಲೆಯ, ಡೋಹರ, ಸಮಗಾರ, ಮಾದರ, ಮಚಗಾರ ಎಂಬ ಐದು ಚರ್ಮೋದ್ಯೋಗಕ್ಕೆ ಸಂಬಂಧಿಸಿದ ಜಾತಿಗಳ ನಿರ್ಮಾಣ (ಇಂದು ದಲಿತ, ಪಂಚಮ, ಪರಿಶಿಷ್ಟ ಜಾತಿ) ಬಸವ ಪೂರ್ವದಲ್ಲಿದ್ದದ್ದು ಕಂಡುಬರುತ್ತದೆ.

ವರ್ಣ ಪದ್ಧತಿಯಲ್ಲಿ ಬ್ರಾಹ್ಮಣ. ಕ್ಷತ್ರಿಯ, ವೈಶ್ಯ.. ಶೂದ್ರ ಹಾಗೂ ಅಸ್ಪೃಶ್ಯ (ಪಂಚಮ) ಎಂಬುದು ಶ್ರೇಣೀಕೃತ ಸಮಾಜ ಪದ್ಧತಿಯಲ್ಲಿ ಮೇಲ್ಜಾತಿಯವರು ಕೆಳಜಾತಿಯವರನ್ನು ನಿರಂತರವಾಗಿ ಶೋಷಿಸುತ್ತಲೇ ಬಂದರು. ಇದರಿಂದಾಗಿ ಅಗ್ರಜ-ಅಂತ್ಯಜ ಎಂಬ ಭಯಾನಕ ಕಂದಕಗಳೇ ಉಂಟಾದವು.

ಶೂದ್ರರಲ್ಲಿ ರೈತಮೊದಲ್ಗೊಂಡು ಅನೇಕ ಕೈ ಕಸಬುದಾರರು, ಗಾಣಿಗ, ಬಣಜಿಗ, ನೇಕಾರ, ಬಡಿಗ, ಕಮ್ಮಾರ, ಕುಂಬಾರ, ಪತ್ತಾರ, ಸಿಂಪಿಗ, ಹೂಗಾರ, ಮೇದಾರ, ಕುರುಬ, ಒಕ್ಕಲಿಗ, ಅಂಬಿಗ, ಬೇಡ, ಮುಂತಾದ ಉದ್ಯೋಗದ ಜನರ ವೃತ್ತಿಗಳೆಲ್ಲ ಜಾತಿ-ಉಪಜಾತಿಗಳಾಗಿ ವಿಭಜನೆಗೊಂಡು ಮತ್ತೆ ಅವುಗಳಲ್ಲಿಯೇ ಶ್ರೇಷ್ಠ ಕನಿಷ್ಠ ವೃತ್ತಿಗಳೆಂಬ ಭೇದ ಕಲ್ಪಿಸಲ್ಪಟ್ಟಿತು. ಪಂಚಮ ವರ್ಣದ ಜನರಾಗಿದ್ದ ಅಂದಿನ ವರ್ಣವ್ಯವಸ್ಥೆಯ ಸಮಾಜದಿಂದ ಬಹಿಷ್ಕೃತರಾಗಿದ್ದ ಭಾರತದ ಆದಿವಾಸಿಗಳು (ದ್ರಾವಿಡ ಮೂಲನಿವಾಸಿಗಳು) ಚರ್ಮೋದ್ಯೋಗ ವೃತ್ತಿಗೆ ಸಂಬಂಧಿಸಿದವರಾಗಿದ್ದರೂ ಮತ್ತೆ ಅವರಲ್ಲಿಯೇ ಎಡಗೈ-ಬಲಗೈ ಎಂದೂ, ಮೇಲು-ಕೀಳು ಎಂಬ ಭಾವನೆ ಹುಟ್ಟಿಕೊಂಡು, ಇಡೀ ಭಾರತದ ಸಮಾಜ ವ್ಯವಸ್ಥೆಯೇ ಹದಗೆಟ್ಟು ಹಳಸಿಹೋಗಿತ್ತು. ಬ್ರಾಹ್ಮಣರು ಭೂಸುರರಾಗಿ, ರಾಜರು (ಕ್ಷತ್ರಿಯರು) ಪ್ರತ್ಯಕ್ಷ ದೇವತೆಗಳಾಗಿ, ವೈಶ್ಯರು ವ್ಯಾಪಾರ ಮಾಡುತ್ತಾ ಧನಿಕರಾಗಿದ್ದರು. ಮೇಲಿನ ಈ ಮೂರು ವರ್ಣಗಳವರ ಸೇವೆಯಲ್ಲಿ ಶೂದ್ರರು, ಅನಂತರ ನಾಲ್ಕೂ ವರ್ಣದವರಿಗೆ ಸತ್ತ ದನ ಹೊತ್ತೊಯ್ದು ಚರ್ಮಸುಲಿದು, ಚರ್ಮಹದಗೊಳಿಸಿ, ಮೊಚ್ಚೆ, ಚಪ್ಪಲಿ, ಮುಂತಾದವುಗಳನ್ನು ತಯಾರಿಸಿಕೊಡುವ ಪಂಚಮ ವರ್ಣಿಯರು ಶೋಷಣೆಗೆ ಒಳಗಾಗಿದ್ದರು. ಚಾತುರವರ್ಣ ಧರ್ಮ-ಸಮಾಜ ಪದ್ಧತಿಯಲ್ಲಿ ದಲಿತ-ಪಂಚಮರು ಪಶುಗಳಿಗಿಂತಲೂ ಕಡೆಯಾಗಿ ಹೊಟ್ಟೆ-ಬಟ್ಟೆಗಳಿಗಿಲ್ಲದೇ ಊರ ಹೊರಗೆ ಕೇರಿಗಳಲ್ಲಿ ಗುಡಿಸಲು ಕಟ್ಟಿಕೊಂಡು ವಾಸಮಾಡಬೇಕಾಗಿತ್ತು. ಇವರು ಅಕಸ್ಮಾತ್ ಉಚ್ಚ ವರ್ಣಿಯರ ಅಗ್ರಹಾರದ ಗೋಶಾಲೆಗಳಲ್ಲಿ ಮೇಲ್ಜಾತಿಯವರ ಮನೆಯ ಕೊಟ್ಟಿಗೆಗಳಲ್ಲಿ ದನ-ಕರುಗಳು ಸತ್ತಿದ್ದರೆ, ಅವುಗಳನ್ನು ಹೊತ್ತೊಯ್ಯಲು, ಶೂದ್ರ ಜನಾಂಗದ ಕೆಲಸದಾಳು ಅಥವಾ ಸೇವಕರು ಊರ ಹೊರಗೆ ಬಂದು ನಿಂತು ಕೂಗು ಹಾಕಿ ಕರೆದಾಗ ಮಾತ್ರ ಓಣಿಯೊಳಗೆ ಬರಬೇಕಿತ್ತು. ಆ ಸಮಯದಲ್ಲಿ **ಮೂರು ನಿಯಮಗಳನ್ನು** ಪಾಲಿಸಲೇಬೇಕಿತ್ತು ೧) ಮಧ್ಯಾಹ್ನ ನಡುಬಿಸಿಲಿನಲ್ಲಿ ಅಥವಾ ನಡುರಾತ್ರಿಯಲ್ಲಿ ಮಾತ್ರ ಊರೊಳಗೆ ಬರಬೇಕು ೨) ಸೊಂಟಕ್ಕೆ ಪೊರಕೆ (ರಜಗೀಲು ಕಟ್ಟಿಕೊಳ್ಳಬೇಕು, ಕೊರಳಲ್ಲಿ ಮಣ್ಣಿನ ಗಡಿಗೆ (ಮಡಿಕೆ, ಪರ್ಯಾಣ) ನೇತು ಹಾಕಿಕೊಂಡಿರಬೇಕು. ೩) ಸಂಬೋಳಿ, ಸಂಬೋಳಿ ಎಂದು ಕೂಗುತ್ತಾ ಬರಬೇಕು. ಈ ಕೂಗು ಕೇಳಿಸಿದ್ದೇ ತಕ್ಷಣ ಮೇಲ್ಜಾತಿಯವರು ತಮ್ಮ ಮನೆಯ ಬಾಗಿಲು-ಕಿಟಕಿಗಳನ್ನು ಮುಚ್ಚಿಕೊಳ್ಳುತ್ತಿದ್ದರು. ಅಂತ್ಯಜನು ಮದ್ಯಾಹ್ನ ಬಂದರೆ ಆತನ ದೇಹದ ನೆರಳು ಆತನ ಪಾದದಡಿಯಲ್ಲಿಯೇ ಇರುತ್ತಿತ್ತು. ಮಧ್ಯಾಹ್ನದ ಮೊದಲು ಅಥವಾ ನಂತರ ಬಂದರೆ ಆತನ ನೆರಳು ಉದ್ದವಾಗಿದ್ದು ಮೇಲ್ಜಾತಿಯವರ ಮನೆಯ ಗೋಡೆ, ಬಾಗಿಲುಗಳನ್ನು ಸ್ಪರ್ಶಿಸಿದರೆ, ಆ ಮನೆಗಳು ಮೈಲಿಗೆಯಾಗುತ್ತವೆ. ಅವುಗಳನ್ನು ಆನಂತರ ನೀರಿನಿಂದ ತೊಳೆದು ಮಡಿ ಮಾಡಬೇಕಿತ್ತು ! ಆತ ರಸ್ತೆಯಲ್ಲಿ ಸಾಗಿ ಬರುವಾಗ, ಆತನ ಪಾದದ ಹೆಜ್ಜೆ ಗುರುತು ಮೂಡಿದರೆ, ಆ

ಗುರುತಿನ ಮೇಲೆ ಆಕಸ್ಮಾತ್ ಮೇಲ್ಜಾತಿಯವರು ನಡೆದಾಡಿದರೆ ಅವರೂ ಮೈಲಿಗೆಯಾಗುತ್ತಿದ್ದರು ! ಅಂತೆಯೇ ಸೊಂಟಕ್ಕೆ ಪೊರಕೆ ಕಟ್ಟಿಕೊಂಡಿದ್ದರೆ, ದಲಿತನು ಸಾಗಿ ಹೋದಂತೆಲ್ಲಾ ಆ ಪೊರಕೆಯು ಹೆಜ್ಜೆಯ ಗುರುತುಗಳನ್ನು ಅಳಿಸಿಹಾಕುತ್ತಿತ್ತು. ಆತನಿಗೆ ಅಕಸ್ಮಾತ್ ಕೆಮ್ಮು ಬಂದು ಉಗುಳು-ಕಫ ಬಂದರೆ, ಆತನು ರಸ್ತೆಯ ಅಕ್ಕ-ಪಕ್ಕದಲ್ಲಿ ಉಗುಳುವಂತಿಲ್ಲ. ತನ್ನ ಕೊರಳಲ್ಲಿಯ ಮಣ್ಣಿನ ಕುಡಿಕೆಯಲ್ಲಿಯೇ ಉಗಳಬೇಕಿತ್ತು! ಇಂತಹ ದೌರ್ಜನ್ಯ-ನೋವು-ಅವಮಾನ ಸಹಿಸಿಕೊಂಡು ಸತ್ತ ದನ ಎಳೆದೊಯ್ದು ಹೊರಕೇರಿಗಳಲ್ಲಿ ಚರ್ಮಸುಲಿದು, ಅವುಗಳಿಂದ ಚರ್ಮದ ಚೀಲ, ಚಮ್ಮಾವುಗೆ, ಬಾರಕೋಲು, ಮಿಣಿ, ಏತ ತಯಾರಿಸಿ ಮೇಲ್ಜಾತಿಯವರಿಗೆ ಅರ್ಪಿಸಬೇಕು. ಅವರು ಎಸೆಯುವ ಕಾಸನ್ನೋ, ತಂಗಳನ್ನ-ಹಳಸಿದನ್ನವನ್ನು ಒಯ್ದು ಹೆಂಡಿರು-ಮಕ್ಕಳನ್ನು ಸಾಕಬೇಕಿತ್ತು. ಇದು ನಿಮ್ಮ ಹಿಂದಿನ ಜನ್ಮಗಳ ಪಾಪದ ಫಲ, ನೀವು ಹೀಗೆ ಹುಟ್ಟಿದ್ದೀರಿ, ನಮ್ಮ ಸೇವೆ ಮಾಡಿ ಮುಂದಿನ ಜನ್ಮದಲ್ಲಿ ಸುಖ ಸಿಗುತ್ತದೆ ಎಂದು ಕರ್ಮಸಿದ್ಧಾಂತದ ಕಥೆಗಳನ್ನು ಕಟ್ಟಿ ಅವರಿಗೆಲ್ಲಾ ಬಿಂಬಿಸಿಬಿಟ್ಟಿದ್ದರು.

ಅಂದಿನ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆ ಬಾಲ್ಯವಿವಾಹ, ತೊಟ್ಟಿಲ ಬಾಸಿಂಗ ಜಾರಿಯಲ್ಲಿತ್ತು. ಮದುವೆಯಾದ ಬಾಲಕ ರೋಗ-ರುಜಿನ ಬಂದು, ವಿಷಜಂತು ಕಚ್ಚಿ, ಅಕಾಲಿಕ ಮರಣಹೊಂದಿದರೆ ಚಿಕ್ಕ ವಯಸ್ಸಿನ ಬಾಲಕಿ(ಪತ್ನಿ)ಯು ಬಾಲವಿಧವೆಯಾಗಿ ಜೀವನ ಪರ್ಯಂತರ ತಲೆಬೋಳಿಸಿಕೊಂಡು, ಕೆಂಪುಸೀರೆ ಉಟ್ಟು, ಮನೆಯ ಒಳಕೋಣೆಗಳಲ್ಲಿಯೇ ಅಮಂಗಲೆಯಾಗಿ, ದುಡಿಯುತ್ತಲೇ ಕಣ್ಣೀರು-ಕೂಳು ತಿನ್ನುತ್ತಾ ನರಕಸದೃಶ ಜೀವನ ಕಳೆಯಬೇಕಿತ್ತು. ಗಂಡ ಸತ್ತ ಹೆಂಡತಿಯನ್ನು ವಿಧವೆ ಎಂದು ಕರೆಯಲಾಗುತ್ತಿತ್ತು. ವಿಧವೆಯರಿಗೆ ಪುನರ್ ವಿವಾಹ ನಿಷಿದ್ಧವಾಗಿತ್ತು. ಅದೇ ಹೆಂಡತಿ ಸತ್ತ ಗಂಡನು ವಿಧುರ ನಾದರೆ ಪುನರ್ ವಿವಾಹ ಮಾಡಿಕೊಳ್ಳಲು ಅವಕಾಶವಿತ್ತು! ಇನ್ನು ಕೆಲವು ಮೇಲ್ಜಾತಿಗಳಲ್ಲಿ ಗಂಡ ಸತ್ತರೆ ಹೆಂಡತಿಯು ಆತನ ಶವದೊಂದಿಗೆ ಚಿತೆಯ ಮೇಲೆ ಕುಳಿತು ಅಗ್ನಿಯಲ್ಲಿ ಬೆಂದು ಹೋಗುತ್ತಿದ್ದಳು, ಸತಿ ಸಹಗಮನ ಪದ್ಧತಿ ಜಾರಿಯಲ್ಲಿತ್ತು. ಮೇಲ್ಜಾತಿಯ ಮೂರು ವರ್ಣದವರಲ್ಲಿ ಬಹುಪತ್ನಿತ್ವ ಜಾರಿಯಲ್ಲಿತ್ತು. ಮೊದಲ ಪತ್ನಿ ತನ್ನ ಜಾತಿಯವಳಿದ್ದು, ಉಳಿದ ಪತ್ನಿಯರು ಕೆಳವರ್ಣಿಯರಿದ್ದರೂ ನಡೆಯುತ್ತಿತ್ತು. ಇದನ್ನು ಅನುಲೋಮ ವಿವಾಹ ಪದ್ಧತಿ ಎನ್ನುತ್ತಿದ್ದರು. ಕೆಳವರ್ಣದವರು ಮೇಲ್ ವರ್ಣದ ಕನ್ಯೆಯರನ್ನು ಮದುವೆಯಾಗುವಂತಿಲ್ಲ. ಒಂದು ವೇಳೆ ಆದರೆ ಅದನ್ನು ಪ್ರತಿಲೋಮ ಅಥವಾ ವಿಲೋಮ ವಿವಾಹವೆಂದು ಕರೆದು ಅವರನ್ನು ಸಮಾಜದಿಂದ ಬಹಿಷ್ಕಾರ ಹಾಕಿಯೋ ಅಥವಾ ಕೊಲ್ಲಿಸಿ ಬಿಡುತ್ತಿದ್ದರು. (ಇಂದಿನ ಆಧುನಿಕ ವ್ಯವಸ್ಥೆಯಲ್ಲಿ ಮರ್ಯಾದಾಹತ್ಯೆ ಎಂಬ ಕ್ರೌರ್ಯ ಅಲ್ಲಲ್ಲಿ ನಡೆಯುತ್ತಿರುವುದನ್ನು ಕೇಳುತ್ತೇವೆ.)

ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬುದು ಕಟ್ಟು ನಿಟ್ಟಾಗಿ ಜಾರಿಯಲ್ಲಿತ್ತು. ದಲಿತರಂತೆ ಎಲ್ಲ ವರ್ಣದ ಮಹಿಳೆಯರಿಗೆ ಧಾರ್ಮಿಕ ಸಂಸ್ಕಾರ, ವಿದ್ಯೆ, ಆಸ್ತಿಯ ಹಕ್ಕು, ದೇವರ ಪೂಜೆ, ದೇವಾಲಯ ಪ್ರವೇಶದ ಸ್ವಾತಂತ್ರ್ಯವಿರಲಿಲ್ಲ.

ಗೋದಾನ, ವಸ್ತ್ರದಾನ, ಹಿರಣ್ಯದಾನ, ಭೂದಾನದಂತೆ ಮದುವೆಕಾಲಕ್ಕೆ ವಧುವನ್ನು ಕನ್ಯಾದಾನವೆಂದು ಧಾರೆ ಎರೆದುಕೊಡುವ ಪದ್ಧತಿ ಜಾರಿಯಲ್ಲಿತ್ತು (ಇಂದಿಗೂ ಇದೆ) ಸ್ತ್ರೀಯರೂ ಕೂಡ ಪುರುಷನ ಭೋಗವಸ್ತುವಾಗಿ ಮಕ್ಕಳನ್ನು ಹೆರುವ ಯಂತ್ರವಾಗಿ, ಪತಿಯ ದಾಸಿಯಾಗಿ ಪರಿಗಣಿಸಲ್ಪಟ್ಟಿದ್ದರು.

ದಲಿತ-ಪಂಚಮ ವರ್ಣದ ಸುಂದರ ಕನ್ಯೆಯರನ್ನು ಮುತ್ತು ಕಟ್ಟಿಸಿ, ದೇವದಾಸಿಯಾಗಿ ಮಾಡಿ ಅವಳನ್ನು ಬಸವಿ ಎಂದೋ, ಪಾತ್ರದವಳೆಂದೋ ನರ್ತಕಿಯಾಗಿಸಿಯೋ ದೇವಾಲಯಗಳಲ್ಲಿ ರಂಗಭೋಗ-ಅಂಗಭೋಗ, ನಡೆಸುತ್ತಿದ್ದರು. ಇದಕ್ಕೆ ಪ್ರಮುಖ ಕಾರಣವೆಂದರೆ ಅವರನ್ನು ನಿರಂತರವಾಗಿ ವಿದ್ಯೆಯಿಂದ ವಂಚಿತರನ್ನಾಗಿ ಮಾಡಿ, ಅವರ ಬಡತನ, ಅಸಹಾಯಕತೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದರು.

ನಾಲ್ಕು ಆಶ್ರಮಗಳಲ್ಲಿ ಬ್ರಹ್ಮಚರ್ಯಾಶ್ರಮದ ವಿದ್ಯೆಯು ಮೇಲಿನ ಮೂರು ವರ್ಣದವರಿಗೆ ಮಾತ್ರ ಮೀಸಲಾಗಿದ್ದು, ಶೂದ್ರಾತಿ ಶೂದ್ರರು, ಸ್ತ್ರೀಯರು ವಿದ್ಯೆಯಿಂದ ವಂಚಿತರಾಗಿದ್ದರು. ಇವರು ಬಾಳಿನುದ್ದಕ್ಕೂ ದುಡಿಯುತ್ತ ಸೇವೆ ಮಾಡುತ್ತಲೇ ಸಾಯಬೇಕು. ಇನ್ನು ಸಂಸಾರ ಕನಿಷ್ಠ-ಸಂನ್ಯಾಸಿ ಶ್ರೇಷ್ಠ ಎಂಬ ವಿಕೃತ ಪದ್ಧತಿಯು ಜಾರಿಯಲ್ಲಿತ್ತು.

ಜ್ಯೋತಿರ್ ವಿಜ್ಞಾನ ಶಾಸ್ತ್ರವನ್ನು ಫಲಜ್ಯೋತಿಷ್ಯಕ್ಕೆ ದುರ್ಬಳಕೆ ಮಾಡಿಕೊಂಡು, ಕಾಲವನ್ನು ವಿಭಜಿಸಿ ರಾಹುಕಾಲ, ಗುಳಿಕಾಲ ಯಮಗಂಡಕಾಲ-ವನ್ನಾಗಿಸಿ ಶುಭ-ಅಶುಭ ಮುಹೂರ್ತಗಳನ್ನು ಕಲ್ಪಿಸಿಕೊಂಡು, ಅಂಧಶ್ರದ್ಧೆ-ಮೂಢ ನಂಬಿಕೆಗಳನ್ನು ಮುಗ್ಧ ಜನರಲ್ಲಿ ಬಿತ್ತಿ ನಿರಂತರ ಶೋಷಣೆ ನಡೆದಿತ್ತು.

'ವಿದ್ಯಾಹೀನ ಮಾನವಾ: ಪಶು ಸಮಾನ :' ಎಂದು ಉಪದೇಶ ಮಾಡುತ್ತಲೇ ಶೂದ್ರ-ಅಂತ್ಯಜರನ್ನು, ಎಲ್ಲ ವರ್ಣಗಳ ಸ್ತ್ರೀಯರನ್ನು ವಿದ್ಯೆ ನೀಡದೇ ಅವರನ್ನು ಪಶುಸಮಾನವಾಗಿಯೇ ಉಳಿಯುವಂತೆ ಮಾಡಿದ್ದರು. ಅಕಸ್ಮಾತ್ ಶೂದ್ರರು-ದಲಿತರು ಮಂತ್ರಪಠಣ ಕೇಳಿದರೆ ಕಿವಿಯಲ್ಲಿ ಕಾದಸೀಸದ ರಸ ಹಾಕುವ, ನೋಡಿದರೆ ಕಾದ ಸಲಾಕೆಯಿಂದ ಕಣ್ಣು ಕೀಳುವ, ಪಠಣ ಮಾಡಿದರೆ ನಾಲಿಗೆ ಕತ್ತರಿಸಿ ಹಾಕುವ, ಯಜ್ಞ-ಯಾಗ ಮಾಡಿದರೆ ತಲೆ ಕತ್ತರಿಸುವ ಶಿಕ್ಷೆಗೆ ಪಾತ್ರರಾಗುತ್ತಿದ್ದರು. ಹೀಗಾಗಿ ಭಯದಿಂದ ವಿದ್ಯೆಯ ಸಹವಾಸವೇ ಬೇಡವೆಂದು ದೂರವೇ ಉಳಿದಿದ್ದರು.

### iv) ರಾಜಕೀಯ ಪರಿಸ್ಥಿತಿ :

ಬಸವಣ್ಣನವರ ಜನನದ ಪೂರ್ವದಲ್ಲಿ ಭಾರತದಲ್ಲಿ ರಾಜ-ಮಹಾರಾಜ ಚಕ್ರವರ್ತಿಗಳ ಆಳ್ವಿಕೆಯ ಕಾಲವಾಗಿತ್ತು. ಆಯಾ ರಾಜರ ಸಾಮ್ರಾಜ್ಯದಲ್ಲಿ ಮಾಂಡಲಿಕರು, ಪಾಳೆಯಗಾರರು, ಜಮೀನದಾರರು ರಾಜ್ಯಭಾರ ಮಾಡುತ್ತಿದ್ದರು. ಅಲ್ಲಲ್ಲಿ ಮುತ್ಸದ್ದಿ, ಜನಹಿತದ ರಾಜರಿದ್ದರೆ, ಬಹುತೇಕರು ತಮ್ಮ ನಿರಂಕುಶ ಆಡಳಿತದಿಂದ ರಾಜ್ಯ ವಿಸ್ತಾರದ ದಾಹ, ಪ್ರಜೆಗಳ ಮೇಲೆ ದೌರ್ಜನ್ಯ ಅಧಿಕಾರಿಗಳ ಅಟ್ಟಹಾಸ ಎದ್ದು ಕಾಣುತ್ತಿತ್ತು. ಇದರಿಂದಾಗಿ ಎಲ್ಲೆಡೆಯಲ್ಲಿ ಮೇಲಿಂದ ಮೇಲೆ ನಡೆಯುವ ಯುದ್ಧಗಳು, ಅರಾಜಕತೆ, ಅಸ್ಥಿರತೆಯಿಂದಾಗಿ ಸಾಮಾನ್ಯ ಪ್ರಜೆಗಳ ಬದುಕು ಜರ್ಜರಿತಗೊಂಡಿತ್ತು.

ಕರ್ನಾಟಕವನ್ನೊಳಗೊಂಡು ಬಹುತೇಕ ದಕ್ಷಿಣ ಭಾರತವನ್ನು ಆಳಿದವರು ಬಾದಾಮಿಯ **ಚಾಲುಕ್ಯರು**. ಇವರು ಕ್ರಿ.ಶ. ೪೫೦ ರಿಂದ ೭೫೩ ವರೆಗೆ ಆಡಳಿತ ನಡೆಸಿದ್ದರು. ಇವರನ್ನು ಸೋಲಿಸಿ **ರಾಷ್ಟ್ರಕೂಟರು** (ಕ್ರಿ.ಶ. ೭೫೩-೯೭೩) ವರೆಗೆ ಆಳಿದರು. ರಾಷ್ಟ್ರಕೂಟರ ಆಡಳಿತ ಕಾಲದಲ್ಲಿ ಚಾಲುಕ್ಯರು ಅವರ ಸಾಮಂತರಾಗಿ ಉಳಿದರು. ಮುಂದೆ ರಾಷ್ಟ್ರಕೂಟರ ದುರ್ಬಲ ರಾಜ ಕರ್ಕನನ್ನು ಸೋಲಿಸಿ ಚಾಲುಕ್ಯವಂಶದ ಇಮ್ಮಡಿ ತೈಲಪನು ಅಧಿಕಾರಕ್ಕೆ ಬಂದು ಮತ್ತೆ ಚಾಲುಕ್ಯ ಸಾಮ್ರಾಜ್ಯವನ್ನು ಮರಳಿ ಸ್ಥಾಪಿಸಿದನು. ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಾನ್ಯಖೇಟದಿಂದಲೇ ರಾಜ್ಯವಾಳಿದ. ಅನಂತರ ಇವನ ಮಗ ಇರಿವಬೆಡಂಗ ಸತ್ಯಾಶ್ರಯನು (ಕ್ರಿ.ಶ. ೯೯೭) ರಲ್ಲಿ ರಾಜ್ಯಭಾರ ನಡೆಸಿದನು (ಈತನ ಆಶ್ರಯದಲ್ಲಿಯೇ ರನ್ನನು ಅಜಿತಪುರಾಣ ಹಾಗೂ ಸಾಹಸ ಭೀಮ ವಿಜಯ ಎಂಬ ಎರಡು ಮಹಾಕಾವ್ಯಗಳನ್ನು ರಚಿಸಿದ್ದನ್ನು ಕಾಣುತ್ತೇವೆ). ಅನಂತರ ಐದನೆಯ ವಿಕ್ರಮಾದಿತ್ಯ, ಅನಂತರ ಇಮ್ಮಡಿ ಜಯಸಿಂಹ ಆಡಳಿತ ನಡೆಸಿದರು. ಈತನ ಕಾಲದಲ್ಲಿ ಚೋಳರೊಂದಿಗೆ ಯುದ್ಧ ನಡೆದು ರಾಜಧಾನಿ ಮಾನ್ಯಖೇಟ (ಈಗಿನ ಕಲಬುರ್ಗಿ ಜಿಲ್ಲೆಯ ಮಳಖೇಡ)ವು ಹಾನಿಗೊಳಗಾದ್ದರಿಂದ, ಜಯಸಿಂಹನು ತನ್ನ ರಾಜಧಾನಿ ಯಾದಗಿರಿಗೆ ಬದಲಿಸಿದನು. (ಈತನ ಕಾಲದಲ್ಲಿ ದೇವರ ದಾಸಿಮಯ್ಯನು ಇದ್ದು, ಜಯಸಿಂಹನ ರಾಣಿ ಸುಗ್ಗಲೆಯು ಈತನ ಶಿಷ್ಯಳಾಗಿದ್ದಳು) ಜಯಸಿಂಹನ ಮಗ ಒಂದನೆ ಸೋಮೇಶ್ವರನು ಚಕ್ರವರ್ತಿಯಾಗಿ ತನ್ನ ರಾಜಧಾನಿಯನ್ನು 'ಕಲ್ಯಾಣ'ಕ್ಕೆ ಬದಲಾಯಿಸಿದ್ದರಿಂದ ಅಲ್ಲಿಂದ **ಕಲ್ಯಾಣದ ಚಾಲುಕ್ಯರ** ಆಡಳಿತ ಪ್ರಾರಂಭಗೊಂಡಿತು.

**ಕಲ್ಯಾಣದ ಚಕ್ರವರ್ತಿ** ಒಂದನೇ ಸೋಮೇಶ್ವರನ ಮಗ ೬ನೇ ವಿಕ್ರಮಾದಿತ್ಯನು ಪಟ್ಟಾಭಿಷಕ್ತನಾದ ನಂತರ ಕಲ್ಯಾಣದ ಕೀರ್ತಿಯು

ದಶದಿಕ್ಕುಗಳವರೆಗೂ ಹಬ್ಬಿತು. ಈತನು ದಕ್ಷಿಣ ಭಾರತದಿಂದ ಉತ್ತರಭಾರತಕ್ಕೆ ದಂಡೆತ್ತಿ ಹೋಗಿ, ಗೆದ್ದು ಅಲ್ಲಿ ಈತನು ತನ್ನ ಪ್ರತಿನಿಧಿಗಳಾಗಿ ಮಾಂಡಲಿಕರನ್ನು ನೇಮಿಸಿದನು. ಅವರೇ ಬಂಗಾಳದ ಸೇನ, ಬಿಹಾರ-ನೇಪಾಳಗಳಲ್ಲಿ ಕರ್ನಾಟಕ ವಂಶಗಳ ದೊರೆಗಳೆಂದು ಇತಿಹಾಸಕಾರರು ದಾಖಲಿಸಿದ್ದಾರೆ. ಚೋಳರು, ಹೊಯ್ಸಳರು ಈ ಚಕ್ರವರ್ತಿಯ ಸಾಮಂತರಾಗಿದ್ದರು.

**ಆರನೇ ವಿಕ್ರಮಾದಿತ್ಯನ** ಸಾಮಂತರಲ್ಲೊಬ್ಬನಾಗಿದ್ದ ಮಂಗಳವೇಡೆಯ **ಕಲಚೂರ್ಯ** ವಂಶದ ಜೋಗಮನು ತನ್ನ ಮಗಳು ಸಾವಲದೇವಿಯನ್ನು ವಿಕ್ರಮಾದಿತ್ಯನಿಗೆ ಕೊಟ್ಟು ಮದುವೆ ಮಾಡಿ ಸಂಬಂಧ ಬೆಳೆಸಿದ್ದನು. ಅದೇ ಕಾಲಕ್ಕೆ ವಿಕ್ರಮಾದಿತ್ಯನು ಸಹ ತನ್ನ ಇನ್ನೊಬ್ಬ ರಾಣಿ ಚಂದಲದೇವಿಯ ಮಗಳನ್ನು ಕಲಚೂರಿ ಜೋಗಮನ ಮಗ ಪೆರ್ಮಾಡಿಗೆ ಕೊಟ್ಟು ಮದುವೆ ಮಾಡಿದ್ದನು. ಇವರ ಮಗನೇ ಬಿಜ್ಜಳನು ಹೀಗೆ ಕಲ್ಯಾಣದ ಚಾಲುಕ್ಯರು ಹಾಗೂ ಅವರ ಸಾಮಂತರಾಗಿದ್ದ ಮಂಗಳವಾಡದ ಕಲಚೂರಿ ಮನೆತನಗಳ ಸಂಬಂಧವಿತ್ತು. ಕಲ್ಯಾಣದ ಚಕ್ರವರ್ತಿ ಮೂರನೇ ತೈಲಪನು ದುರ್ಬಲನಾಗಿದ್ದರಿಂದ ಕಲಚೂರಿ ವಂಶದ ಬಿಜ್ಜಳನು ಈ ತೈಲಪನನ್ನು ತೆಗೆದು ಹಾಕಿ ತಾನೇ ಬಲಿಷ್ಠ ಚಕ್ರವರ್ತಿಯಾದನು. (ಈತನ ಕಾಲದಲ್ಲಿಯೇ ಬಸವಣ್ಣನವರು ವಿವಿಧ ಹುದ್ದೆಗಳನ್ನು ನಿರ್ವಹಿಸಿ ಪ್ರಧಾನ ಮಂತ್ರಿಯಾಗಿದ್ದುದು).

ಈ ಬಿಜ್ಜಳನಿಗೆ ಮಹಾಮಂಡಲೇಶ್ವರ, ರಾಯಸಮುದ್ದರಣನ್, ಭುಜಬಲ ಚಕ್ರವರ್ತಿ, ತ್ರಿಭುವನಮಲ್ಲ, ಮಹಾರಾಜಾಧಿರಾಜ, ಎಂಬ ಬಿರುದುಗಳಿದ್ದವು.

ಈ ರೀತಿಯಾಗಿ ಬಸವಪೂರ್ವಯುಗದಲ್ಲಿ ಭಾರತದ ರಾಜಕೀಯ ಧಾರ್ಮಿಕ, ಸಾಮಾಜಿಕ, ಪರಿಸ್ಥಿತಿಯು ರಾಜ-ಮಹಾರಾಜರು, ಅವರಿಗೆ ಮಾರ್ಗದರ್ಶಕರಾಗಿದ್ದ ಬ್ರಾಹ್ಮಣ-ಪುರೋಹಿತರ ಕೈಗಳಲ್ಲಿದ್ದು, ಅವರ ಇಚ್ಛೆಯಂತೆ ಆಡಳಿತ ನಡೆಯುತ್ತಿತ್ತು. ನಿರಂತರವಾಗಿ ಬಲಿಷ್ಠ-ದುರ್ಬಲರ ನಡುವೆ ಯುದ್ಧಗಳು ನಡೆಯುತ್ತಾ, ಸಮಾಜ ಜೀವನ ಅಸ್ಥಿರ, ಅತಂತ್ರವಾಗಿಯೇ ಇರುತ್ತಿತ್ತು.

## ೨. ಬಸವಭಾನುವಿನ ಉದಯ : [ಕ್ರಿಶ. ೧೧೦೫]

ಮರ್ತ್ಯಲೋಕದ ಮಹಾಮನೆ ಹಾಳಾಗಿ
ಹೋಗಬಾರದೆಂದು ಕರ್ತನಟ್ಟಿದನಯ್ಯಾ ಒಬ್ಬ ಶರಣನ !
ಆ ಶರಣ (ಬಸವಣ್ಣ) ಬಂದು ಕಲ್ಯಾಣವೆಂಬ ಶಿವಪುರವ
ಕೈಲಾಸವ ಮಾಡಿ, ರುದ್ರಗಣ ಪ್ರಮಥಗಣಂಗಳೆಲ್ಲರ
ಹಿಡಿತಂದು, ಅಮರಗಣಂಗಳೆಂದು ಹೆಸರಿಟ್ಟು ಕರೆದು,
ಅಗಣಿತ ಗಣಂಗಳೆಲ್ಲರ ಹಿಡಿತಂದು

ಅಸಂಖ್ಯಾತರೆಂಬ ಹೆಸರಿಟ್ಟು ಕರೆದು,
ಭಕ್ತಿಯ ಕುಳಸ್ಥಳವ ಶ್ರುತದೃಷ್ಟ ಪವಾಡವಂ
ಮೆರೆದು ತೋರಿ, ಜಗವರಿಯೆ ಶಿವಾಚಾರದ ಧ್ವಜವನೆತ್ತಿ
ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಗೆಯಾದನು
ಆ ಶಿವಶರಣನ ಮನೆಯೊಳಗಿಪ್ಪ
ಶಿವಗಣಂಗಳ ತಿಂಥಿಣಿಯ ಕಂಡು
ಎನ್ನ ಮನ ಉಬ್ಬಿ ಕೊಬ್ಬಿ ಓಲಾಡುತ್ತಿದ್ದೆನಯ್ಯ
ನಮ್ಮ ಗುಹೇಶ್ವರನ ಶರಣ ಸಂಗನಬಸವಣ್ಣನ
ದಾಸೋಹದ ಘನವನೇನೆಂದೆನಬಹುದು
ನೋಡಾ ಸಿದ್ಧರಾಮಯ್ಯ.

ವ್ಯೋಮಕಾಯಸಿದ್ಧ, ನಿರಂಜನ ಜಂಗಮವಿಭು, ಶರಣ ಅಲ್ಲಮ ಪ್ರಭುದೇವರು ಈ ವಚನದಲ್ಲಿ ವಿಶ್ವಗುರು ಬಸವಣ್ಣನವರ ಜನನದ ಉದ್ದೇಶವನ್ನು ಬಹಳ ಸ್ಪಷ್ಟವಾಗಿ ಅರುಹಿದ್ದಾರೆ. ಮರ್ತ್ಯಲೋಕದ ಮಹಾಮನೆ ಅಂದರೆ ಈ ಜಗತ್ತು ಅನಾಚಾರ, ದುರಾಚಾರ, ಮೂಢಾಚಾರ, ಕಂದಾಚಾರ, ಶುಷ್ಕಾಚಾರಗಳಿಂದ ಹಾಳಾಗಿಹೋಗಬಾರದೆಂದು, ಪರಶಿವನ ಸದಿಚ್ಛೆಯಂತೆ ಈ ಲೋಕದಲ್ಲಿ ಜನಿಸಿದರು. ಮರ್ತ್ಯಲೋಕದ ಮಾನವರ ಮನದ ಕತ್ತಲೆಯನ್ನು ಜ್ಞಾನಸೂರ್ಯನಾಗಿ ಕಳೆದರು. ಕತ್ತಲೆಯ ಪಾಳಯವ ರವಿಯು ಹೊಕ್ಕಂತೆ ಕಾರ್ತಿಕದ ಕತ್ತಲಲ್ಲಿ ಆಕಾಶ ದೀಪವಾಗಿ ಬಸವಭಾನುವಿನ ಉದಯವಾಯಿತು.

### i) ಬಸವಣ್ಣನವರ ಜನನ–ಬಾಲ್ಯ :

೧೨ ನೇಯ ಶತಮಾನದಲ್ಲಿ ಭಾರತದ ದಕ್ಷಿಣಭಾಗದಲ್ಲಿ 'ಕಲ್ಯಾಣ'ವನ್ನು ರಾಜಧಾನಿಯಾಗಿಸಿಕೊಂಡು ಚಾಲುಕ್ಯ ಚಕ್ರವರ್ತಿಗಳು ಸಾಮ್ರಾಜ್ಯವನ್ನು ಆಳುತ್ತಿದ್ದರು. ಈ ಚಾಲುಕ್ಯ ಸಾಮ್ರಾಜ್ಯದ ಮಾಂಡಲೀಕ ರಾಜರಲ್ಲಿ ಮಂಗಳವಾಡಿಯ ಕಲಚೂರ್ಯ ವಂಶದ ಜೋಗಮ, ಪೆರ್ಮಾಡಿ ಆಳುತ್ತಿದ್ದರು. ತರ್ದವಾಡಿ ಸಾಸಿರ ಎಂಬ ಭೂಪ್ರದೇಶವು (ಸೊಲ್ಲಾಪೂರ ಜಿಲ್ಲೆಯ ದಕ್ಷಿಣಭಾಗ ಮತ್ತು ವಿಜಾಪೂರ ಜಿಲ್ಲೆಯ ಉತ್ತರ ಭಾಗವನ್ನೊಳಗೊಂಡ ಭಾಗವು) ಮಂಗಳವಾಡಿಯ ಕಲಚೂರಿ ಮಾಂಡಲಿಕರ ಆಡಳಿತಕ್ಕೆ ಒಳಪಟ್ಟಿತ್ತು. ತರ್ದವಾಡಿ ಪ್ರಾಂತದ ಪ್ರಮುಖ ಪಟ್ಟಣ ಇಂಗಳೇಶ್ವರ ಬಾಗೇವಾಡಿಯಾಗಿತ್ತು. ಅಂದು ಬಾಗೇವಾಡಿಯು ಬ್ರಾಹ್ಮಣರ ಪ್ರಮುಖ ಅಗ್ರಹಾರವಾಗಿತ್ತು. ಈ ಅಗ್ರಹಾರದ ಅಧಿಪತಿ ಮಂಡಗೆಯ ಮಾದಿರಾಜ (ಮಾದರಸ). ಈತನು ಅಗ್ರಹಾರದ ಬ್ರಾಹಣರಿಗೆಲ್ಲ ಅಗ್ರೇಸರ ಅಂದರೆ ನಾಯಕ–ನಾಗಿದ್ದನು. ಈ ಮಾದರಸನ ಪತ್ನಿ ಮಾದಲಾಂಬೆ (ಮಾದಲಾಂಬಿಕೆ)ಯು. ಇವಳ ತವರುಮನೆ ಇಂಗಳೇಶ್ವರವಾಗಿತ್ತು.

ಈ ಮಾದರಸ-ಮಾದಲಾಂಬಿಕೆಯರು ಸಾಂಖ್ಯಾಯನಗೋತ್ರದ ಕಮ್ಮೆ ಕುಲದ ಶೈವ ಬ್ರಾಹ್ಮಣರು. ಸ್ವತಃ ಮಾದರಸನೂ 'ಶೈವಾಗಮಾಚಾರ್ಯ' ಎಂಬ ಬಿರುದು ಹೊಂದಿದ್ದ ವಿಪ್ರೋತ್ತಮನಾಗಿದ್ದನು. ಈ ಬ್ರಾಹ್ಮಣದಂಪತಿಗಳಿಗೆ **'ನಾಗಮ್ಮ'** (ನಾಗಲಾಂಬಿಕೆ) ಹೆಸರಿನ ಮಗಳು ಇದ್ದಳು. ಮಗಳು ಜನಿಸಿದ ನಂತರ ಬಹುಕಾಲ ಮಕ್ಕಳಾಗಲಿಲ್ಲ. ಅಂತೆಯೆ ಮಾದಲಾಂಬಿಕೆಯು ಬಾಗೇವಾಡಿ ಅಗ್ರಹಾರದಲ್ಲಿದ್ದ ಸಂಗಮೇಶ್ವರ ದೇವಾಲಯದಲ್ಲಿರುವ ಬೃಹದಾಕಾರದ ನಂದಿ (ವೃಷಭ) ವ್ರತ ಮಾಡಲು ಕಪ್ಪಡಿ ಸಂಗಮದ ಗುರುಗಳ ಸಲಹೆಯಂತೆ ನಿರ್ಧರಿಸಿದಳು ' ವೃಷಭ ನೋಂಪಿ' ಅಂದರೆ ನಂದಿ ವ್ರತ ಮಾಡಿದುದರಿಂದ ಜನಸಿದ ಗಂಡುಮಗುವಿಗೆ **'ಬಸವ'**ಎಂದು ನಾಮಕರಣ ಮಾಡಿದರು. ಬಸವಣ್ಣನವರು ಜನಿಸಿದ್ದು ಕ್ರಿ.ಶ. ೧೧೦೫ ಅಕ್ಷಯ ತೃತಿಯಾದಂದು-ಇಂಗಳೇಶ್ವರದ ತಾಯಿಯ ಮನೆಯಲ್ಲಿ. (ಕೆಲವು ವಿದ್ವಾಂಸರು ಕ್ರಿ.ಶ. ೧೧೩೧ ವೈಶಾಖಶುದ್ಧ ಅಕ್ಷಯ ತೃತಿಯಾ ರೋಹಿಣಿ ನಕ್ಷತ್ರವೆಂದು ಸಾಂಪ್ರದಾಯಿಕವಾಗಿ ನಂಬಿದ್ದಾರೆ. ಖ್ಯಾತ ಇತಿಹಾಸತಜ್ಞ ಡಾ. ಪಾಂಡುರಂಗ ದೇಸಾಯಿ ಅವರು ಕ್ರಿ. ಶ. ೧೧೦೫ ಎಂದು ದಾಖಲೆ ಸಹಿತ ನಿರ್ಧರಿಸಿದ್ದಾರೆ).

ಇಂಗಳೇಶ್ವರ ಬಾಗೇವಾಡಿಯ ಬ್ರಾಹ್ಮಣ ಅಗ್ರಹಾರದಲ್ಲಿ ಜನಿಸಿದ ಬಾಲಕ ಬಸವಣ್ಣ ಬಾಲ್ಯದಲ್ಲಿಯೇ ಅನೇಕ ಪಂಡಿತರ, ವಿದ್ವಾಂಸರ ಚರ್ಚೆ,ವಾದ-ವಿವಾದಗಳನ್ನು ಆಲಿಸುತ್ತಾ ಬೆಳೆದನು. ಅಕ್ಕ ನಾಗಮ್ಮಳ ಪ್ರೀತಿಯ ತಮ್ಮನಾಗಿ ತನ್ನ ಚುರುಕುಬುದ್ಧಿಯನ್ನು ಬೆಳೆಸಿಕೊಂಡನು. ಮಗು ಜನನವಾದಾಗ ಮನೆತನದ ಗುರುಗಳಾಗಿದ್ದ **ಕಪ್ಪಡಿ ಸಂಗಮದ ಈಶಾನ್ಯ ಗುರುಗಳು** (ಸಂಗಮೇಶ್ವರ ಗುರುಗಳು) ಆಗಮಿಸಿ ಹಣೆಗೆ ಭಸ್ಮಧರಿಸಿ, ಕಿವಿಯಲ್ಲಿ ಶಿವಮಂತ್ರ ಉಸುರಿ, ಆಶೀರ್ವಾದ ಮಾಡಿ ಹೋಗಿದ್ದರು. ಶೈವ ಬ್ರಾಹ್ಮಣ ಮನೆತನವಾದ್ದರಿಂದ ಬಾಲ್ಯದಿಂದಲೂ ಶಿವಭಕ್ತಿಯನ್ನು ಅಂಗವಿಸಿಕೊಂಡು ಬಸವಣ್ಣನವರು ಬೆಳೆದರು.

ಬಸವಣ್ಣನವರ ಜನನ ಕಾಲದ **ಅವಿಸ್ಮರಣೀಯ ಘಟನೆ**ಯೊಂದನ್ನು ಹೇಳುತ್ತಾರೆ. ಮಾದಲಾಂಬಿಕೆಯು ತವರುಮನೆಗೆ ಇಂಗಳೇಶ್ವರಕ್ಕೆ ಹೆರಿಗೆಗಾಗಿ ಹೋಗಿದ್ದಳು. ಇತ್ತ ಬಾಗೇವಾಡಿ ಅಗ್ರಹಾರದ ಒಬ್ಬ ವಿಪ್ರರ ಮನೆಯಲ್ಲಿ ಆಕಳೊಂದು ಸತ್ತಿತ್ತು. ಆ ಸತ್ತ ದನವನ್ನು ಒಯ್ಯಲು ಅಂದು ಮಧ್ಯಾಹ್ನ ಬಾಗೇವಾಡಿಯ ಹೊರಕೇರಿಯಲ್ಲಿಯ **'ಹೊಲೆಯರ ಕೇತ'** ಎಂಬುವವನು ಬಂದಿದ್ದನು. ಅಗ್ರಹಾರದ ಉತ್ತಮರ ಒಂದು ಓಣಿಯಲ್ಲಿ ತಲೆತಗ್ಗಿಸಿ ಬರುತ್ತಿರುವಾಗ, ಅಲ್ಲೊಬ್ಬರ ಮನೆಯಲ್ಲಿ ಯಜ್ಞ-ಹೋಮ ನಡೆದಿತ್ತು. ಮಂತ್ರಪಠಣ ಕೇಳಿಬರುತ್ತಿತ್ತು. ಕುತೂಹಲ ತಡೆಯದೇ ಹೊಲೆಯರ ಕೇತನು ತಲೆ ಮೇಲೆತ್ತಿ ನೋಡಿದನು. ಅವರ ಮಂತ್ರಗಳು ಈತನ ಕಿವಿಗೆ ಬಿದ್ದವು. ಈತನು ಕ್ಷಣಕಾಲ ನಿಂತಿದ್ದನ್ನು ಕಂಡು ಸಂಪ್ರದಾಯವಾದಿ ಕರ್ಮಠರು ಆತನದು ಅಪರಾಧವೆಂದು ನಿರ್ಧರಿಸಿ ಆಳುಗಳ ಮೂಲಕ ಅಗ್ರಹಾರದ ಅಧಿಪತಿ ಮಾದರಸರ ಮನೆಯ ಅಂಗಳದಲ್ಲಿ ನ್ಯಾಯನಿರ್ಣಯಕ್ಕೆ ಎಳೆತಂದರು. ಅಂದಿನ

ನ್ಯಾಯ ಪದ್ಧತಿಯಂತೆ ವೇದಮಂತ್ರ ಕೇಳಿದ ಕ್ಯಾತನ 'ಕಿವಿಗೆ ಕಾದ ಸೀಸ ಹಾಕಬೇಕು. ಕಬ್ಬಿಣ ಸಲಾಕೆಯಿಂದ ಕಣ್ಣು ಕೀಳಿಸಬೇಕು' ಎಂಬ ನಿರ್ಣಯವನ್ನು ಮಾದರಸರು ಆಜ್ಞೆ ಮಾಡಬೇಕೆಂಬಷ್ಟರಲ್ಲಿ ಇಂಗಳೇಶ್ವರದಿಂದ ಅದೇ ಕಾಲಕ್ಕೆ ಆಗಮಿಸಿದ ದೂತನೊಬ್ಬನು 'ಮಾದರಸರೆ, ತಮಗೆ ಪುತ್ರ ಜನನವಾಗಿದೆ' ಅಂದರೆ ಬಸವಣ್ಣನ ಜನನದ ಸುದ್ದಿಯನ್ನ ಹೇಳಿದನು. ಈ ಸಂತೋಷದ ಸಮಾಚಾರ ತಿಳಿದ ಮಾದರಸರು ಅಲ್ಲಿ ನೆರೆದಿದ್ದ ಬ್ರಾಹ್ಮಣರ ಕಡೆ ನೋಡಿ, ಈ ಶುಭ ಸಂದರ್ಭದಲ್ಲಿ ಇದೊಂದು ಸಲ ಎಚ್ಚರಿಕೆಯನ್ನಿತ್ತು, ಹೊಲೆಯರ ಕೇತನನ್ನು ಕ್ಷಮಿಸಿರುವುದಾಗಿ ಹೇಳಿದರು. ಅಗ್ರಹಾರದ ಬ್ರಾಹ್ಮಣರು ಅನಿವಾರ್ಯವಾಗಿ ತಮ್ಮ ನಾಯಕರ ಮನೆಯ ಆನಂದದ ಸಂಭ್ರಮಕ್ಕೆ ತೊಂದರೆಯಾಗಬಾರದೆಂದು ಸುಮ್ಮನಾದರು. ಹೊಲೆಯರ ಕೇತನನ್ನು ಬಿಡುಗಡೆ ಮಾಡಿದರು.

ಸಾವಿನ ದವಡೆಯಲ್ಲಿ ಸಿಲುಕಿ ತತ್ತರಿಸುತ್ತಿದ್ದ ಕೇತನು- 'ಅದೇ ಆಗ ಇಂಗಳೇಶ್ವರದಲ್ಲಿ ಜನಿಸಿದ ಆ ಮಗುವನ್ನು ನೆನೆಯುತ್ತಾ-**ಅಪ್ಪಾ ಮಗು(ಬಸವಣ್ಣಾ) ನೀನು ಹುಟ್ಟುತ್ತಲೇ ಹೊಲೆಯನ ಬಿಡುಗಡೆ ಮಾಡಿದೆ ತಂದೆ**' ಎಂದು ಕಂಗಳಲ್ಲಿ ಆನಂದಾಶ್ರುತುಂಬಿಕೊಂಡು ಉದ್ಗರಿಸಿದನು. ಈ ಪ್ರಸಂಗವು ಬಸವಣ್ಣನವರ ಜನನದ ಉದ್ದೇಶವನ್ನು ಸಾರುವಂತಿದೆ.

ಬಸವಣ್ಣನವರು ಬಾಲಕನಾಗಿದ್ದಾಗಿ ಬಾಲಸ್ವಭಾವದ ಕುತೂಹಲದಿಂದ ತಮ್ಮ ಅಗ್ರಹಾರ ಪರಿಸರದ ಸಮಾಜೋ-ಧಾರ್ಮಿಕ ಪರಿಸ್ಥಿತಿಯನ್ನು ಗಮನಿಸುತ್ತಾ ವಿಚಾರ ಮಾಡುತ್ತಾ, ಸಂಶಯಗಳು ಹುಟ್ಟಿದಾಗ ಅಕ್ಕನಾಗಮ್ಮಳಿಗೆ ಕೇಳುತ್ತಾ ತುಂಬಾ ಚುರುಕುಬುದ್ಧಿಯವರಾಗಿ ಬೆಳೆದರು. ಪ್ರಶ್ನಿಸದೇ ಯಾವುದನ್ನೂ ಒಪ್ಪಿಕೊಳ್ಳುತ್ತಿರಲಿಲ್ಲ. ಹೀಗೆಯೇ' ಬೆಳೆವ ಸಿರಿ ಮೊಳಕೆಯಲ್ಲಿಯೇ ನೋಡು' ಎಂಬಂತೆ ಇವರ ಅಂತರಂಗದಲ್ಲಿ ಹುದುಗಿದ್ದ ಪ್ರತಿಭೆ ವಿಕಾಸವಾಗತೊಡಗಿತು. ವರ್ಣಭೇದ, ಜಾತಿಭೇದಗಳು ಗಮನಕ್ಕೆ ಬಂದಿದ್ದವು. ಮನೆಯಲ್ಲಿ ತಂದೆಯು ಹಲವು ದೇವರುಗಳ ಮೂರ್ತಿಪೂಜೆ ಮಾಡುತ್ತಿದ್ದರು. ತಾಯಿಗಾಗಲೀ, ಅಕ್ಕನಿಗಾಗಲೀ, ಪೂಜೆ ಮಾಡುವ ಹಕ್ಕಿರಲಿಲ್ಲ. ಅಗ್ರಹಾರದ ಹೊರಗೆ ಬಯಲಲ್ಲಿ ದಲಿತರನ್ನು ಮುಟ್ಟಿಸಿಕೊಳ್ಳುವಂತಿಲ್ಲ ಮುಂತಾದ ಎಚ್ಚರಿಕೆ ಹೇಳಿ ಕಳಿಸುತ್ತಿದ್ದರು. ಈ ಮೇಲು-ಕೀಳು, ಸ್ಪೃಶ್ಯ- ಅಸ್ಪೃಶ್ಯ, ಗಂಡು-ಹೆಣ್ಣುಗಳೆಂಬ ಭೇದಭಾವ ಕಂಡು ಚಿಂತಿಸುತ್ತಿದ್ದರು.

## ii) ಉಪನಯನ ಸಂಸ್ಕಾರ ಪ್ರಸಂಗ :

ಬ್ರಾಹ್ಮಣ ಮನೆತನದ, ಅಗ್ರಹಾರ ಸಮಾಜದ ಪರಂಪರೆಯಂತೆ ಎಂಟನೆಯ ವರುಷಕ್ಕೆ ಬಸವಣ್ಣನವರಿಗೆ 'ಉಪನಯನ ಸಂಸ್ಕಾರ' ಮಾಡಬೇಕೆಂದು ಮಾದರಸರು ನಿರ್ಧರಿಸಿದರು. ಅಗ್ರಹಾರದ ಅಧಿಪತಿಯ ಮನೆಯಲ್ಲಿ ಸರ್ವಸಿದ್ಧತೆಗಳು ಭರದಿಂದ

ನಡೆದವು. ಇಂಗಳೇಶ್ವರದಿಂದ ಬಂಧು-ಬಳಗದವರು, ಅಗ್ರಹಾರದ ವಿಪ್ರರು, ಪುರೋಹಿತರು ಆಗಮಿಸಿದರು. ಅಗ್ನಿ ಕುಂಡ ಸಿದ್ಧಪಡಿಸಿ ಹೋಮ-ಹವನ ನಡೆಯಿತು. ಎಂಟು ವರುಷದ ಬಾಲಕನಿಗೆ ಶೈವಾಗಮಿಕ-ವೈದಿಕ ಪುರೋಹಿತರು ಮಂತ್ರಗಳನ್ನುಚ್ಚರಿಸುತ್ತಾ ಗಾಯಿತ್ರಿ ಮಂತ್ರೋಪದೇಶದ ಮೂಲಕ ಜನ್ನಿವಾರ ಹಾಕಲು ಮುಂದಾದರು. ಆಗ ಬಸವಣ್ಣನವರ ಅಂತರಂಗದಲ್ಲಿ ಹತ್ತಿಕ್ಕಲ್ಪಟ್ಟಿದ್ದ ಕ್ರಾಂತಿಯ ಕಿಡಿಯು ಪ್ರಶ್ನೆಗಳ ಮೂಲಕ ಹೊರಹೊಮ್ಮಿತು. **ಉಪನಯನವೆಂದರೇನು ?** ಪಂಡಿತರು ಹೇಳಿದರು- ಇದು ಒಳಗಿನ ಅರಿವಿನ ಕಣ್ಣು ಜಾಗೃತಗೊಳಿಸುವ ಸಂಸ್ಕಾರ, ಇದರಿಂದ ನೀನು ವೇದಾಧ್ಯಯನಕ್ಕೆ ಪಾತ್ರನಾಗುವಿ 'ಜನ್ಮನಾ ಜಾಯತೇ ಶೂದ್ರ, ಸಂಸ್ಕಾರಾತ್ ದ್ವಿಜಮುಚ್ಯತೆ' ಎಂದು ಶಾಸ್ತ್ರಗಳು ಹೇಳುತ್ತವೆ. ಹುಟ್ಟಿನಿಂದ ಎಲ್ಲರೂ ಶೂದ್ರರು. ಈ ಸಂಸ್ಕಾರದಿಂದ ನೀನು ದ್ವಿಜನಾಗುವಿ (ಎರಡನೇ ಜನ್ಮ ಪಡೆಯುವಿ) ಎಂದರು. ಬಸವಣ್ಣನವರ ೨ನೇ ಪ್ರಶ್ನೆ-ನನಗಿಂತ ಮುಂಚೆ ಹುಟ್ಟಿರುವ ನನ್ನ ಅಕ್ಕ ನಾಗಮ್ಮ ಮನೆಯಲ್ಲಿದ್ದಾಳೆ ಅವಳೂ ಜನ್ಮದಿಂದ ಶೂದ್ರಳೇ ಅನ್ನುವುದಾದರೆ ಅವಳಿಗೂ ಈ ಉಪನಯನ ಸಂಸ್ಕಾರ ನೀಡಿ ಜನಿವಾರ ಹಾಕಿರಿ ಎಂದಾಗ ಪಂಡಿತರು ಸಿಡಿಮಿಡಿಗೊಳ್ಳುತ್ತಲೆ-ಸ್ತ್ರೀಯರಿಗೆ ಧಾರ್ಮಿಕ ಸಂಸ್ಕಾರದ ಹಕ್ಕಿಲ್ಲ. ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ಎಂದು ಶಾಸ್ತ್ರಗಳು ಹೇಳಿವೆ. ಎಂದು ಉತ್ತರಿಸಿದರು. ಅದೇ ಪ್ರಕಾರ ವರ್ಣಾಶ್ರಮಧರ್ಮ ಪದ್ಧತಿಯಲ್ಲಿ ಶೂದ್ರರಿಗೆ, ದಲಿತರಿಗೆ, ಮಹಿಳೆಯರಿಗೆ ಧಾರ್ಮಿಕ ಸಂಸ್ಕಾರ ಪಡೆಯುವ ಅಧಿಕಾರವಿಲ್ಲ ಎಂಬುದನ್ನು ಅರಿತ ಬಸವಣ್ಣನವರು ' ನನ್ನ ಹಡೆದ ತಾಯಿ, ನನ್ನ ಅಕ್ಕನಿಗೆ ಶೂದ್ರ ಎನ್ನುವುದಾದರೆ, ನನಗೂ ಈ ಸಂಸ್ಕಾರ ಬೇಡವೆಂದು ಹೇಳಿ, ಕೈಯಲ್ಲಿ ಹಿಡಿದಿರ್ದ **ಕರ್ಮಲತೆಯಂತಿರ್ದ ಜನ್ನಿವಾರವನ್ನು ಕಿತ್ತು ಬಿಸುಟು'** ಎದ್ದು ನಿಂತರು, ಹೆಣ್ಣು-ಗಂಡಿನಲ್ಲಿ, ಬ್ರಾಹ್ಮಣ- ಅಂತ್ಯಜರಲ್ಲಿ ಭೇದ ಕಲ್ಪಿಸುವ ಈ ಸಂಸ್ಕಾರ ನನಗೂ ಬೇಡ ಎಂದು ಹಟ ಹಿಡಿದಾಗ, ಕರ್ಮಠ ಪುರೋಹಿತರು 'ಇಂತಹ ಉದ್ಧಟ ಬಾಲಕನನ್ನು ಧರ್ಮ-ಸಮಾಜದಿಂದ ಬಹಿಷ್ಕಾರ ಹಾಕುವದಾಗಿ ಕ್ರೋಧದಿಂದ ನುಡಿಯಲು ಬಸವಣ್ಣನವರು ಎಂಟು ವರುಷದ ದಿಟ್ಟ ಧೀರ ಬಾಲಕನಾಗಿ, ಬಾಗೇವಾಡಿ ಅಗ್ರಹಾರ ತೊರೆದು ಕಪ್ಪಡಿ ಸಂಗಮದೆಡೆಗೆ ನಡೆದರು.

## ೩. ಕಪ್ಪಡಿ ಸಂಗಮದ ಗುರುಕುಲದಲ್ಲಿ : [೧೧೧೪-೧೧೨೬]

### i) ವಿದ್ಯಾರ್ಜನೆ :

ಕಪ್ಪಡಿ ಸಂಗಮವು ಕೃಷ್ಣಾ ಹಾಗೂ ಮಲಾಪಹಾರಿ ನದಿಗಳು ಕೂಡುವ ಸುಮನೋಹರ ಸಂಗಮ ಕ್ಷೇತ್ರವಾಗಿತ್ತು. ಅಲ್ಲಿ ಸುಪ್ರಸಿದ್ಧವಾದ ಸಂಗಮೇಶ್ವರ ದೇವಾಲಯವಿದೆ. ಇದು ಹೊಯ್ಸಳರ ಶಿಲ್ಪಕಲೆಯ ಅದ್ಭುತ ಮಾದರಿಯ ದೇವಸ್ಥಾನವಾಗಿದೆ. ಪ್ರಾಚೀನ ಕಾಲದ ಶಾಸನಗಳಲ್ಲಿ ಸಂಗಮೇಶ್ವರ, ಕಾಳೇಶ್ವರ,

ಆಚೇಶ್ವರ, ಎಂಬ ಮೂರು ಗುಡಿಗಳಿದ್ದವು.(ಇಂದು ಅವುಗಳನ್ನು ಕೂಡಲ ಸಂಗಮೇಶ್ವರ, ಸಿದ್ದೇಶ್ವರ, ಜಾತವೇದಿ ಗುಡಿಗಳೆಂದು ೧೯೬೭ರ ರಿಂದ ಬಸವಣ್ಣನವರ ಅಷ್ಟ ಶತಮಾನೋತ್ಸವ ಸಂದರ್ಭದಿಂದ ಕರೆಯತೊಡಗಿದ್ದಾರೆ ಎಂದು ಸಂಶೋಧಕರು ಹೇಳುತ್ತಾರೆ).

ಬಸವಣ್ಣನವರು ಕಪ್ಪಡಿ ಸಂಗಮಕ್ಕೆ ಬರಲು ಪ್ರಮುಖವಾಗಿ ಎರಡು ಕಾರಣಗಳು ೧) ಬಾಲ್ಯದಿಂದಲೂ ತಂದೆ-ತಾಯಿಯರೊಂದಿಗೆ ಕಪ್ಪಡಿ ಸಂಗಮಕ್ಕೆ ಬಂದು ಅಲ್ಲಿಯ ಸ್ಥಾನಪತಿಗಳಾದ ಈಶಾನ್ಯಗುರುಗಳ ದರ್ಶನ ಪಡೆಯುತ್ತಿದ್ದುದು. ೨) ಅಕ್ಕ ನಾಗಮ್ಮಳನ್ನು ಈಗಾಗಲೇ ಮದುವೆ ಮಾಡಿ ಕೊಟ್ಟಿದ್ದರಿಂದ ಅವಳ ಗಂಡ ಶಿವದೇವನ ಮನೆ ಇದ್ದದ್ದು ಸಂಗಮದಲ್ಲಿಯೇ. ಅಕ್ಕ ನಾಗಮ್ಮ ಹಾಗೂ ಭಾವ ಶಿವದೇವರ ಆಶ್ರಯ ಹೀಗಾಗಿ ಬಸವಣ್ಣನವರು ಎಂಟು ವರುಷದ ಬಾಲಕನಾಗಿ ಸಂಗಮಕ್ಕೆ ಬಂದು ಈಶಾನ್ಯಗುರುಗಳ (ಇವರು ಸಂಗಮೇಶ್ವರ ದೇವಾಲಯದ ಸ್ಥಾನಪತಿಗಳಾಗಿದ್ದುದರಿಂದ ಸಂಗಮೇಶ್ವರ ಗುರುಗಳೆಂದೂ ಕರೆಯಲಾಗುತ್ತಿತ್ತು) ಸಾನಿಧ್ಯದಲ್ಲಿ ಅವರ ಗುರುಕುಲದಲ್ಲಿ ವಿದ್ಯಾರ್ಜನೆ ಗೈಯಲು ಅವಕಾಶವಾಯಿತು.

ಬಾಲಕ ಬಸವಣ್ಣ ಗುರುಕುಲದ ನಿಯಮಗಳಂತೆ ಸುಪ್ರಭಾತ ಸಮಯದಲ್ಲಿ ಎದ್ದು,ಕೃಷ್ಣೆ-ಮಲಾಪಹಾರಿ ನದಿಗಳ ಸಂಗಮದಲ್ಲಿ ಸ್ನಾನ ಮಾಡಿ ಗುರುಕುಲ ಉದ್ಯಾನವನದಲ್ಲಿಯ ಪತ್ರಿ-ಪುಷ್ಪಗಳನ್ನು ಗುರುಗಳ ಮುಂದೆ ತಂದಿಡುವುದು. ಗುರುಗಳು ದೇವಾಲಯದಲ್ಲಿ ಪೂಜೆ ಮಾಡುವುದನ್ನು ಭಕ್ತಿಯಿಂದ ನೋಡುತ್ತಾ, ಗುರುಗಳು ಕಲಿಸಿದ ಶಿವಗೀತಗಳನ್ನು ಹಾಡುತ್ತಲಿದ್ದನು. ಗುರುಕುಲದಲ್ಲಿ ವ್ಯವಸ್ಥಿತವಾಗಿ ವೇದಾಗಮಗಳು ಶ್ರುತಿ-ಸ್ಮೃತಿಗಳು, ಪುರಾಣಗಳು, ರಾಮಾಯಣ, ಮಹಾಭಾರತ, ಕಾವ್ಯಗಳು, ಷಡ್‌ದರ್ಶನಗಳ ಅಧ್ಯಯನ ಮಾಡುತ್ತಾ ಹನ್ನೆರಡು ವರುಷ ಗತಿಸಿದವು. ಎಂಟು ವರುಷದ ಬಾಲಕ ಬಸವಣ್ಣ ಈಗ ೨೦ ವರ್ಷದ ತರುಣನಾಗಿ ಸರ್ವವಿದ್ಯಾಪಾರಂಗತನಾಗಿದ್ದರು. ಸ್ವತಂತ್ರ ಚಿಂತನೆಗಳು, ಜೀವನದ ಮುಂದಣ ಯೋಜನೆಗಳು ಮನೋಮಂದಿರದಲ್ಲಿ ಒಡಮೂಡತೊಡಗಿದ್ದವು.

ಗುರುಕುಲದಲ್ಲಿ ವಿದ್ಯಾರ್ಜನೆ ಪೂರ್ಣಗೊಂಡ ನಂತರ, ಅಂದಿನ ಪದ್ಧತಿಯಂತೆ ಗುರುಕುಲದ ಎಲ್ಲಾ ಶಾಸ್ತ್ರಗಳ ಪಂಡಿತ ಗುರುಗಳೊಂದಿಗೆ ವಿದ್ಯಾರ್ಥಿಗಳು ದೇಶಪರ್ಯಟನ (ಶೈಕ್ಷಣಿಕ ಪ್ರವಾಸ) ಕೈಗೊಳ್ಳಬೇಕಿತ್ತು. ಬಸವಣ್ಣನವರು ಈ ಯಾತ್ರೆಯಲ್ಲಿ ಪಾಲ್ಗೊಂಡು ಕನ್ಯಾಕುಮಾರಿಯಿಂದ ಕಾಶ್ಮೀರ-ನೇಪಾಳ-ಹಿಮಾಲಯದವರೆಗೆ ಸಂಚರಿಸಿ, ಅಂದಿನ ಕಾಲದ ವಿದ್ಯಾಕೇಂದ್ರಗಳನ್ನು, ಧಾರ್ಮಿಕ ಕ್ಷೇತ್ರಗಳನ್ನು ಕಂಡರು, ಲೋಕಾನುಭವ ಪಡೆದರು. ಬೇರೆ ಬೇರೆ ರಾಜ್ಯಗಳ ಭಾಷೆಗಳ ಜನ-ಜೀವನ, ಸಮಾಜೋ-ಧಾರ್ಮಿಕ-ರಾಜಕೀಯ ವ್ಯವಸ್ಥೆಗಳನ್ನು ಅರಿತರು. ಈ ಪರ್ಯಟನ ಮುಗಿಸಿ ಬರುವುದರಲ್ಲಿ 'ಕಪಿಲ ಷಷ್ಠಿ

ಜಾತ್ರೆ' ಯ ಯೋಗ ಒದಗಿ ಬಂದಿತು. ಗುರುಕುಲದಲ್ಲಿ ಘಟಿಕೋತ್ಸವವನ್ನೂ ಅದೇ ಕಾಲಕ್ಕೆ ಆಯೋಜಿಸಲಾಯಿತು.

ಕಪ್ಪಡಿ ಸಂಗಮವು ಮೂರು ಶಿವದೇವಾಲಯಗಳ ಸಂಗಮ ಕ್ಷೇತ್ರವಾಗಿದ್ದರಿಂದ ನಾಡಿನೆಲ್ಲೆಡೆಯಿಂದ ಶಿವಭಕ್ತರು ಸಹಸ್ರಾರು ಸಂಖ್ಯೆಯಲ್ಲಿ ಕೂಡುತ್ತಿದ್ದರು. ಹನ್ನೆರಡು ವರುಷಕ್ಕೊಮ್ಮೆ ಬರುವ ' ಕಪಿಲ ಷಷ್ಠಿಯೋಗ' ಸಂದರ್ಭದಲ್ಲಿ ವಿದ್ವಜ್ಜನರು, ನಾಡಿನ ಎಲ್ಲ ಶೈವ ಶಾಖೆಗಳ ಪಂಡಿತರು ಆಗಮಿಸಿ ತತ್ವಗೋಷ್ಠಿಯಲ್ಲಿ ಪಾಲ್ಗೊಳ್ಳುತ್ತಿದ್ದರು. ಆ ಗೋಷ್ಠಿಗಳಲ್ಲಿ ಆಯಾ ಪಂಡಿತರ ವಾದಗಳನ್ನೆಲ್ಲ ನಿರಸನಗೈದು, ಬಸವಣ್ಣನವರು ವೃಷ್ಟಿ ಸಮಷ್ಟಿ ಕಲ್ಯಾಣದ ಸಮಾಜೋ-ಧಾರ್ಮಿಕ-ಸೈದ್ಧಾಂತಿಕವಾದ ತಮ್ಮ ಹೊಸ ವಿಚಾರಗಳನ್ನು ಪ್ರತಿಪಾದಿಸಿದಾಗ ದೇಶದ ಎಲ್ಲ ಭಾಗಗಳಿಂದ ಆಗಮಿಸಿದ್ದ ವೇದ ಪಾರಂಗತರು, ಶಿವಾಗಮಪಂಡಿತರು ಬೆರಗಾದರು. ವೇದ, ಶಾಸ್ತ್ರ ಆಗಮ, ಪುರಾಣ, ತರ್ಕಗಳು ಬೌದ್ಧಿಕ ಚರ್ಚೆಗೆ ಸೀಮಿತವಾದರೆ, ಈ ದೇಶದ ಬಹುಸಂಖ್ಯಾತ ಜನರು ಸುಖ,ಶಾಂತಿ, ನೆಮ್ಮದಿ, ಸಮೃದ್ಧಿಯಿಂದ ಬದುಕುವಂತಾಗುವ ಜೀವನ ಸಿದ್ಧಾಂತಗಳ, ಸೌಹಾರ್ದತೆಯ ಜೀವನದ ಸಮಾನತೆಯ ವಿಚಾರಗಳನ್ನು ಚರ್ಚಿಸಬೇಕೆಂದು ತಿಳಿಸಿದಾಗ, ಸೇರಿದ್ದ ಸಾವಿರಾರು ಜನರು ಮೆಚ್ಚುಗೆ ವ್ಯಕ್ತ ಪಡಿಸಿ, ಬಸವಣ್ಣನವರಲ್ಲಿ ಹೊಸ ಬದುಕಿನ ಆಶಾಕಿರಣ ಕಂಡರು.

ಘಟಿಕೋತ್ಸವ ಹಾಗೂ ಕಪಿಲಷಷ್ಠಿ ಉತ್ಸವಕ್ಕೆ ಆಗಮಿಸಿದ್ದ ಆ ಪ್ರಾಂತದ ಮಾಂಡಲಿಕ ರಾಜ ಬಿಜ್ಜಳನ ಮಂತ್ರಿ ಬಲದೇವ ಹಾಗೂ ಕುಟುಂಬ ಪರಿವಾರದವರು ಈ ಪ್ರತಿಭಾವಂತ ಯುವಕ ಬಸವರಸನ ವಿಚಾರಧಾರೆಗೆ ಮಾರುಹೋದರು. ಸಂಗಮದ ಸ್ಥಾನಪತಿ ಈಶಾನ್ಯಗುರುಗಳಲ್ಲಿ ವಿಚಾರ ಮಾಡಿದಾಗ, ಬಸವಣ್ಣ ಇಂಗಳೇಶ್ವರ ಬಾಗೇವಾಡಿ ಅಗ್ರಹಾರದ ಅಧಿಪತಿಯಾಗಿದ್ದ ಮಾದರಸ-ಮಾದಲಾಂಬಿಕೆಯರ ಪುತ್ರನೆಂದು ತಿಳಿದು ಸಂತಸಪಟ್ಟರು. ಬಿಜ್ಜಳನ ಮಂತ್ರಿಗಳಾಗಿದ್ದ ಬಲದೇವ ಹಾಗೂ ಸಿದ್ಧರಸರು ಮೂಲತ: ಇಂಗಳೇಶ್ವರದೇವರೇ ಆಗಿದ್ದು ಮಾದಲಾಂಬಿಕೆಯ ಸಹೋದರರಾಗಿದ್ದರು. ಹೀಗಾಗಿ ಅವರು ಬಸವಣ್ಣನವರ ಸೋದರ ಮಾವಂದಿ- ರಾದಂತಾಯಿತು. ಬಲದೇವ ಮಂತ್ರಿಯೊಂದಿಗೆ ಉತ್ಸವಕ್ಕೆ ಆಗಮಿಸಿದ್ದ ಬಲದೇವ ಮಂತ್ರಿಯ ಮಗಳು ಗಂಗಾಂಬಿಕೆ, ಸಿದ್ಧರಸರ ಮಗಳು ನೀಲಾಂಬಿಕೆಯರು ಅಲ್ಲಿಯೇ ಬಸವಣ್ಣನವರ ವ್ಯಕ್ತಿತ್ವಕ್ಕೆ ಮಾರುಹೋಗಿದ್ದರು.

ಕಪ್ಪಡಿ ಸಂಗಮದಲ್ಲಿಯೇ ಇದ್ದ ಅಕ್ಕನಾಗಮ್ಮ, ಶಿವದೇವ ಇವರೊಂದಿಗೆ ಬಲದೇವ ಮಂತ್ರಿಗಳು ಚರ್ಚಿಸಿ, ಈಶಾನ್ಯಗುರುಗಳ ದರ್ಶನ ಪಡೆದು, ಮಂಗಳವೇಡೆಗೆ ಆಗಮಿಸಲು ಬಿನ್ನಹ ಮಾಡಿ ಹೋದರು.

### ii) ಇಷ್ಟಲಿಂಗದ ಅವಿಷ್ಕಾರ :

ಎಂಟು ವರುಷದ ಬಾಲಕ ಬಸವಣ್ಣ ಬಾಗೇವಾಡಿ ಅಗ್ರಹಾರದಿಂದ ಬಹಿಷ್ಕಾರಗೊಂಡು, ಕಪ್ಪಡಿ ಸಂಗಮದ ಗುರುಕುಲಕ್ಕೆ ಬಂದು ಅಖಂಡ ಹನ್ನೆರಡು ವರುಷಗಳ ಕಾಲ ವಿದ್ಯಾರ್ಜನೆಗೈಯುತ್ತಾ ಭಾರತೀಯ ಸಮಗ್ರ ಪ್ರಾಚೀನ ಧರ್ಮಶಾಸ್ತ್ರಗಳ ಜ್ಞಾನ ಸಂಪಾದಿಸಿ, ದೇಶಪರ್ಯಟನೆಗೈದು ಲೋಕಾನುಭವ ಸಂಪಾದಿಸಿ ಈಗ ಇಪ್ಪತ್ತೊಂದರ ಯುವಕನಾಗಿ, ತನ್ನ ಭವಿಷ್ಯದ ಬದುಕಿನ ಬಗ್ಗೆ ಸಂಗಮೇಶ್ವರ ದೇವಾಲಯದ ಮುಂಭಾಗದ ಕೃಷ್ಣೆ-ಮಲಾಪಹಾರಿಗಳ ಸಂಗಮದ ಹೆಬ್ಬಂಡೆಯೊಂದರ ಮೇಲೆ ಧ್ಯಾನಾಸಕ್ತನಾಗಿ ವಿಚಾರಮಗ್ನನಾಗಿದ್ದಾನೆ. ಅಂತರಂಗದಲ್ಲಿ ಚಿದ್ಬೆಳಗು ಪ್ರಕಾಶಮಾನವಾಗಿ ಬೆಳಗುತ್ತಿದೆ. ಆ ಬೆಳಗಿನ ಪರಮಾನಂದವನನುಭವಿಸಿ ಸಾವಕಾಶವಾಗಿ ಬಹಿರ್ ಪ್ರಜ್ಞೆಗೆ ಬಂದು, ಕಣ್ತೆರೆದು ತನ್ನ ಸುತ್ತಲಿನ ಅನಂತ ವಿಶ್ವವನ್ನು ನೋಡಿದಾಗ-ಅಂತರಂಗದ ಅನುಭಾವ ಸೂಳ್ನುಡಿಯಾಗಿ ಹೊರಹೊಮ್ಮತೊಡಗಿತು.

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ
ಸಕಲ ವಿಸ್ತಾರದ ರೂಹು ನೀನೇ ದೇವಾ
ವಿಶ್ವತೋ ಚಕ್ಷು ನೀನೇ ದೇವಾ
ವಿಶ್ವತೋ ಮುಖ ನೀನೇ ದೇವಾ
ವಿಶ್ವತೋ ಬಾಹು ನೀನೇ ದೇವಾ
ವಿಶ್ವತೋ ಪಾದ ನೀನೇ ದೇವಾ
ಕೂಡಲಸಂಗಮದೇವಾ

ಅಂತರಂಗದ ಭಾವಭೂಮಿಯಲ್ಲಿ ಕಂಡುಂಡ ಚಿಲ್ಲಿಂಗದ ಚಿದ್ಬೆಳಕು, ಈಗ ಬಹಿರಂಗದಲ್ಲಿ ಮಹಾಲಿಂಗದ ಮಹಾಬೆಳಕಾಗಿ ದಿವ್ಯಪ್ರಕಾಶಮಾನವಾಗಿ ಎಲ್ಲೆಡೆ ಕಾಣುತ್ತಿದೆ. ಅಂತರಂಗದ ಚಿಲ್ಲಿಂಗ ತತ್ವ ಹಾಗೂ ಬಹಿರಂಗದ ಮಹಾಲಿಂಗತತ್ವಗಳು ಕೂಡಿ ಸಂಗಮಿಸಿ ದಿವ್ಯ ಬೆಳಗಾಗಿ, ನಿರಾಕಾರವೇ ಸಾಕಾರಗೊಳ್ಳತೊಡಗಿ ಇಷ್ಟಲಿಂಗ ತತ್ವವಾಗಿ ಹೊರಹೊಮ್ಮತೊಡಗಿತು. ಇದನ್ನೇ **ಕೂಡಲಸಂಗಮದೇವ** ಎಂಬ ಸಾಕಾರ ನಿರಾಕಾರ ಏಕೋ ದೇವ ಕೂಡಲ ಸಂಗಮದೇವ ಎಂಬ ಅರಿವು ಗುರುವಾಗಿ ಆ ಆಚಾರವೇ ಲಿಂಗವಾಗಿ, ಆ ಲಿಂಗವೇ ಜಂಗಮವಾಗಿ, ಆ ಜಂಗಮದ ಅನುಭಾವವೇ ಪ್ರಸನ್ನತೆಯ ಪ್ರಸಾದವಾಗಿ, ಆ ಪ್ರಸನ್ನತೆಯ ಕರುಣೆಯೇ ಚಿದ್ರಸ ಪಾದೋದಕವಾಗಿ ಕಂಡು ಕೊಂಡರು.

### iii) ಸ್ವಯಂಕೃತ ಗುರು :

ಬಸವಣ್ಣನವರು ಸ್ವಯಂಕೃತ ಗುರುವಾಗಿ ಇಷ್ಟಲಿಂಗವೆಂಬ ವಿನೂತನ

ದೇವತತ್ವಕ್ಕೆ ತಂದೆ-ತಾಯಿಯಾದರು. ( ಲಿಂಗವು ಬಸವಣ್ಣನ ಉದರದಲ್ಲಿ ಜನಿಸಿತ್ತು. ಎಂಬ ಪ್ರಭುದೇವರ ವಚನವಿದೆ) ಇಷ್ಟಲಿಂಗ ಜನಕರಾದರು.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ
ಕೂಡಲಸಂಗಮದೇವಯ್ಯ
ಎನ್ನ ಕರಸ್ಥಲಕೆ ಬಂದು ಚುಳುಕಾದಿರಯ್ಯ.

**ಈ ರೀತಿಯಾಗಿ ಕರಸ್ಥಲಕೆ ಬಂದ 'ಚುಳುಕು' ಇಷ್ಟಲಿಂಗ.** ಇದು ಅರುಹಿನ ಕುರುಹು, ಆಚಾರದ ಪ್ರತೀಕ, ಅನುಭಾವದ ನೆಲೆಯಾಗಿದೆ. ಇದನ್ನೆ ಬಸವಣ್ಣನವರು **ಕೂಡಲಸಂಗಮದೇವ** ಎಂಬ ಅಭಿದಾನದೊಂದಿಗೆ ಕರೆದು, ತಮ್ಮ ವಚನಗಳಿಗೆ ಅಂಕಿತವಾಗಿಟ್ಟುಕೊಂಡರು.

ಕಂಥೆ ಕಾಯಕದ ಅಯ್ಯನವರೊಬ್ಬರಿಂದ 'ಇಷ್ಟಲಿಂಗ'ವನ್ನು ತಯಾರು ಮಾಡಿಸಿ, ಸ್ವಯಂ ಅಂಗದ ಮೇಲೆ ಧರಿಸಿ ಮರುದಿನ ಸಂಗಮದ ಅದೇ ಮಹಾಬಂಡೆ (ದಿನ್ನೆ)ಯ ಮೇಲೆ ಕುಳಿತು 'ಲಿಂಗಾಂಗಯೋಗ' ಸಾಧನೆಯಲ್ಲಿ ತೊಡಗಿದರು. ಅದು ತನುವನ್ನು ವೇಧಿಸಿ ಇಷ್ಟಲಿಂಗ, ಮನವನ್ನು ವೇಧಿಸಿ ಪ್ರಾಣ ಲಿಂಗ, ಭಾವವನ್ನು ವೇಧಿಸಿ ಭಾವಲಿಂಗ ಸ್ವರೂಪವಾಯಿತು. ಬೆಳಗಿನೊಳಗಣ ಬೆಳಗು ಮಹಾಬೆಳಗಾಗಿ ಪ್ರಕಾಶಿಸಿತು. ಇದು ಶರಣಸತಿ ಲಿಂಗಪತಿಯ ಮಿಲನವಾಗಿ, ಲಿಂಗಾಂಗ ಸಾಮರಸ್ಯವಾಯಿತು. ಬಸವಣ್ಣನವರು ಸಾಧಿಸಿದ ಈ ಹೊಸ ಯೋಗವೆ 'ಲಿಂಗಾಂಗಯೋಗ' ಬಸವಯೋಗವೆಂದು ಪ್ರಸಿದ್ಧಿಪಡೆಯಿತು. ೧೨ ವರುಷಗಳ ಚಿಂತೆ ದೂರಾಯಿತು-ಬಸವಣ್ಣನವರು ಸ್ವತಃ ಶರಣಸತಿಯಾಗಿ ಲಿಂಗಪತಿಯ ಕೂಡಿದ ಅನುಭವ ಹೇಳಿಕೊಂದಿದ್ದಾರೆ.

ಎನ್ನ ಗಂಡ ಬರಬೇಕೆಂದು
ಎನ್ನಂತರಂಗವೆಂಬ ಮನೆಯ ತೆರಹು ಮಾಡಿ
ಅಷ್ಟದಳವೆಂಬ ಓವರಿಯೊಳಗೆ
ನಿಜ ನಿವಾಸವೆಂಬ ಹಾಸುಗೆಯ ಹಾಸಿ
ಧ್ಯಾನವೆಂಬ ಮೇಲುಕಟ್ಟವಂ ಕಟ್ಟಿ
ಜ್ಞಾನವೆಂಬ ದೀಪ ಬೆಳಗಿ
ನಿಷ್ಕ್ರಿಯೆಯೆಂಬ ಉಪಕರಣಗಳ ಹರಹಿಕೊಂಡು
ಪಶ್ಚಿಮದ್ವಾರವೆಂಬ ಬಾಗಿಲ ತೆರೆದು

ಕಂಗಳೆ ಪ್ರಾಣವಾಗಿ ಬರವ ಹಾರುತಿರ್ದೆನಯ್ಯಾ
ನಾನು ಬಾರದಿರ್ದಡೆ ಉಮ್ಮಳಿಸಿಹೆನೆಂದು
ತಾನೇ ಬಂದು ಎನ್ನ ಹೃದಯ ಸಿಂಹಾಸನದ ಮೇಲೆ
ಮೂರ್ತಗೊಂಡಡೆ–ಎನ್ನ ಬಯಕೆ ಸಯವಾಯಿತ್ತು
ಹಿಂದೆ ಹನ್ನೆರಡು ವರುಷದಲ್ಲಿದ್ದ
ಚಿಂತೆ, ಇಂದು ನಿಶ್ಚಿಂತವಾಯಿತು
ಕೂಡಲಸಂಗಮದೇವರು
ಕೃಪಾಮೂರ್ತಿಯಾದ ಕಾರಣ, ನಾನು ಬದುಕಿದೆನು

ಬಸವಣ್ಣನವರು ಈ ಆಧ್ಯಾತ್ಮ ರಂಗದ ಹೊಸ ಆವಿಷ್ಕಾರದಿಂದಾಗಿ, ವಿಶ್ವದ ಅದ್ಭುತ ಸಂಶೋಧಕ, ಆಧ್ಯಾತ್ಮವಿಜ್ಞಾನಿ, ಬಸವಯೋಗಿ ಎಂದೆನಿಸಿದರು. ಬಾಲ್ಯದಿಂದ ಇಂದಿನವರೆಗೂ ಅವರಲ್ಲಿ ಉದ್ಭವಿಸುತ್ತಿದ್ದ ಎಲ್ಲ ಪ್ರಕಾರದ ಸಮಸ್ಯೆ ಸಂದೇಹ, ಸಂಶಯಗಳಿಗೆಲ್ಲ ಪರಿಹಾರ ಕಂಡುಕೊಂಡಿದ್ದರು. ವಿಶ್ವಚೈತನ್ಯದ ಚಿದಂಶಿಕವಾಗಿರುವ ತನ್ನಂತರಂಗದಲ್ಲಿರುವ ಚಿತ್‌ಚೈತನ್ಯವನ್ನು ಒಳಗೊಂಡಿರುವ ಮಹಾ ಚಿದ್‌ಬೆಳಕನ್ನು ಭಾವದಿಂದ ಮನ, ಮನದಿಂದ ನೇತ್ರ, ನೇತ್ರದಿಂದ ಕರಸ್ಥಲಕ್ಕೆ, ವಿಶ್ವದಾಕಾರದಲ್ಲಿ ಕಂಡುಕೊಂಡಿದ್ದಾರೆ. ಈ ಇಷ್ಟಲಿಂಗವು 'ತನ್ನ ಅರಿವಿನ ಕುರುಹು' ಎಂದು ಅರಿತರು. ಈ ಇಷ್ಟಲಿಂಗ ಮೂಲಕ ಧಾರ್ಮಿಕ ಹಾಗೂ ಸಾಮಾಜಿಕ ಶೋಷಣೆಯಿಂದ ಮಾನವ ಕುಲವನ್ನು ಮುಕ್ತಗೊಳಿಸಲು ನಿರ್ಧರಿಸಿದರು.

### iv) ಸ್ತ್ರೀ ಕುಲೋದ್ಧಾರಕ ಗುರು :

ತಾವು ಈ ಇಷ್ಟಲಿಂಗದ ಮಹತ್ವವನ್ನು ಪ್ರಥಮತಹ ತಮ್ಮ ಸೋದರಿ ಅಕ್ಕ ನಾಗಮ್ಮ, ಭಾವ ಶಿವದೇವ ಹಾಗೂ ಸೊದರಳಿಯ ಚೆನ್ನಬಸವರ ಮುಂದೆ ವಿವರವಾಗಿ ಚರ್ಚಿಸಿದರು, ಈ ಇಷ್ಟಲಿಂಗವು ವರ್ಣಭೇದ, ಆಶ್ರಮಭೇದ, ಲಿಂಗಭೇದ, ಜಾತಿಭೇದಗಳನ್ನು ಅಳಿಸಿ ಹಾಕುವ ಒಂದು ಅದ್ಭುತ ಸಾಧನೆ ಎಂಬುದನ್ನು ಮನವರಿಕೆ ಮಾಡಿಕೊಟ್ಟರು. ಮನೆಯಲ್ಲಿಯ ಮೂವರಿಗೂ ಇಷ್ಟಲಿಂಗದ ನೆಲೆ–ಕಲೆಗಳನ್ನು, ಲಿಂಗಸಕೀಲವನ್ನು ತಿಳಿಸಿ ಷಡಂಗದಲ್ಲಿ ಷಡ್ಲಿಂಗೋಪಾಸನೆಯ ಕ್ರಮವನ್ನು ತಿಳಿಸಿದರು. ಮೂವರಿಗೂ ಇಷ್ಟಲಿಂಗವನ್ನು ಕರುಣಿಸಿದರು. ಸ್ತ್ರೀಯರಿಗೆ ಧಾರ್ಮಿಕ ಸಂಸ್ಕಾರ ನೀಡಲು ಸಂಪ್ರದಾಯ ಕರ್ಮಠರು ನಿರಾಕರಿಸಿದ್ದರೋ ಅಂತಹ ಸ್ತ್ರೀಕುಲದ ಪ್ರತಿನಿಧಿಯಾಗಿರುವ ತಮ್ಮ ಅಕ್ಕ ನಾಗಮ್ಮಳಿಗೆ ಈ ಸಂಸ್ಕಾರವಿತ್ತು ಸಮತೆ–ಸ್ವಾತಂತ್ರ್ಯದ ಪ್ರಥಮ ಗುರುವಾದರು.

ಅಕ್ಕನಾಗಮ್ಮನವರು ಈ ಇಷ್ಟಲಿಂಗ ಸಂಸ್ಕಾರದಿಂದ ಧನ್ಯತೆಯನ್ನು ಅನುಭವಿಸಿದರು. ಶತ ಶತಮಾನಗಳಿಂದ ಯಾವ ಸನಾತನ ಧರ್ಮಪರಂಪರೆಯು

ತನ್ನಂತಹ ಮಹಿಳೆಯರಿಗೆ ಧಾರ್ಮಿಕ ಸಂಸ್ಕಾರದಿಂದ ವಂಚಿತರನ್ನಾಗಿಸಿ ಹೆಣ್ಣು ಶೂದ್ರ, ಮಾಯೆ, ಮಲದಭಾಂಡ, ರಜಸ್ವಲೆ, ಸೂತಕ ಎಂದು ಕರೆದು ಅವಳನ್ನು ಕೇವಲ ಭೋಗವಸ್ತುವನ್ನಾಗಿ ಭಾವಿಸಿತ್ತೊ, ಅಂತಹ ಸಂಪ್ರದಾಯ ಕರ್ಮಠ ಧರ್ಮ- ಸಮಾಜಕ್ಕೆ ಒಂದು ಸರಿಯಾದ ಪರಿಹಾರವಾಗಿತ್ತು. ತನ್ನ ತಮ್ಮನು ಕೇವಲ ತನಗೆ ಮಾತ್ರವಲ್ಲ, ಸಮಸ್ತ ಮಹಿಳಾಕುಲಕ್ಕೆ ಗುರುವಾದನೆಂದು ಆನಂದಪಟ್ಟರು. ಮನೆಯಲ್ಲಿಯೇ ೧೨ ವರುಷ ತಮ್ಮ ಬಸವಣ್ಣನಿಂದ ಓದು- ಬರಹ ಕಲಿತು, ಜ್ಞಾನಿಯಾಗಿದ್ದ ಅಕ್ಕನಾಗಮ್ಮ ಆನಂದದಿಂದ ವಚನ ಬರೆದರು.

ಎನ್ನ ಕುಲಸೂತಕವ ಕಳೆದಾತ ಬಸವಣ್ಣ
ಎನ್ನ ಛಲಸೂತಕವ ಕಳೆದಾತ ಬಸವಣ್ಣ
ಎನ್ನ ತನುಸೂತಕವ ಕಳೆದಾತ ಬಸವಣ್ಣ
ಎನ್ನ ಮನ ಸೂತಕವ ಕಳೆದಾತ ಬಸವಣ್ಣ
ಎನ್ನ ನೆನಹು ಸೂತಕವ ಕಳೆದಾತ ಬಸವಣ್ಣ
ಎನ್ನ ಭಾವ ಸೂತಕವ ಕಳೆದಾತ ಬಸವಣ್ಣ
ಎನ್ನ ಅರುಹು ಮರಹಿನ ಸಂದು ಸಂಶಯವ
ಬಿಡಿಸಿದಾತ ಬಸವಣ್ಣ
ಎನ್ನ ತನ್ನೊಳಗೆ ಇಂಬಿಟ್ಟುಕೊಂಡಾತ ಬಸವಣ್ಣ
ತನ್ನ ಎನ್ನೊಳಗೆ ಇಂಬಿಟ್ಟುಕೊಂಡಾತ ಬಸವಣ್ಣ
ನಿಜದ ನಿರ್ವಯಲ ಬಾಗಿಲ ನಿಜವ
ತೋರಿದಾತ ಬಸವಣ್ಣ
ಬಸವಣ್ಣಪ್ರಿಯ ಚೆನ್ನಸಂಗಯ್ಯನ
ಹೃದಯಕಮಲದಲ್ಲಿ ನಿಜವಾಸಿಯಾಗಿರಿಸಿದ
ಎನ್ನ ತಂದೆ ಸಂಗನಬಸವಣ್ಣನು

ಅಕ್ಕನಾಗಮ್ಮನವರಿಗೆ ಬಸವಣ್ಣ ಈಗ ಕೇವಲ ತನ್ನ ಒಡಹುಟ್ಟಿದ 'ತಮ್ಮ'ನಾಗಿ ಕಾಣಲಿಲ್ಲ. ತನಗೆ ಧರ್ಮಸಂಸ್ಕಾರವಿತ್ತ, ಅಧ್ಯಾತ್ಮ ಮಾರ್ಗತೋರಿದ ಗುರು (ತಂದೆ) ವಾಗಿ ಕಂಡನು.

ಹನ್ನೆರಡು ವರುಷದ ಚೆನ್ನಬಸವಣ್ಣ ಬಾಲ್ಯದಿಂದಲೇ ತಾಯಿ-ತಂದೆ, ಸೋದರಮಾವ ಬಸವಣ್ಣನವರ ಒಡನಾಟದಲ್ಲಿ, ಸಂಗಮದ ಈಶಾನ್ಯಗುರುಗಳ ಗುರುಕುಲದಲ್ಲಿ ಜ್ಞಾನಿಯಾಗಿ ಬೆಳೆದವನು ' ಮರುಗದ ಗಿಡ ಹುಟ್ಟುತ್ತಲೇ ಪರಿಮಳ' ಸೂಸುವಂತೆ ಚೆನ್ನಬಸವಣ್ಣ ಜ್ಞಾನ ಕಿರಣವಾಗಿ ಹೊಮ್ಮುತ್ತಿದ್ದ. ಬಸವಣ್ಣನವರಿಂದ ಇಷ್ಟಲಿಂಗ ಸಂಸ್ಕಾರ ಪಡೆದ ಚೆನ್ನಬಸವಣ್ಣ ಕಿರಿಯ ವಯಸ್ಸಿನಲ್ಲಿಯೇ ವಚನ

ರಚನೆಗೆ ಪ್ರಾರಂಭಿಸಿದವನು.

ಬಸವನೇ ಬಿಲ್ಲಾಳಾಗಿ ಹೊಸಭಕ್ತಿ ಅಂಬಾಗಿ
ಎಸೆದನಯ್ಯಾ ಆ ಮಹಾಲಿಂಗವನೆ ಗುರಿಮಾಡಿ
ಶಿಸುವು ಬಾಣವಕೊಂಡು ಬಸುರಮಧ್ಯವ ತಾಗೆ
ಹೊಸದೆಸೆಗಳೆಲ್ಲಾ ಕಾಣಬಂದವಯ್ಯಾ!
ಭಸ್ಮದೆಣ್ಣೆಯ ಹೂಸಿ ಕೂಡಲ ಚನ್ನಸಂಗಯ್ಯನಲ್ಲಿ
ಬಸವ ಪೂಯದ ಬಂದು ಆರೈದ ಲಿಂಗವನು

ಎಂದು ಹೃದಯತುಂಬಿ ಹೇಳಿಕೊಂಡಿದ್ದಾನೆ. ಇದೊಂದು ಇಷ್ಟಲಿಂಗದ ಕುರಿತಾದ ಚಾರಿತ್ರಿಕ ದಾಖಲೆಯಾಗಿದೆ. ಬಸವಣ್ಣನೆಂಬ ಗುರುವು ನಿರಾಕಾರ-ವಾಗಿರುವ ದೇವತತ್ವವನ್ನು ಸಾಕಾರಗೊಳಿಸಿ ಕೊಟ್ಟ ರೀತಿಯನ್ನು ಈ ವಚನದಲ್ಲಿ ಕಾಣುತ್ತೇವೆ.

ನಮಃ ಶಿವಾಯ ಲಿಂಗವು
ಓ ನಮಃ ಶಿವಾಯ ಬಸವಣ್ಣನು
ಎನ್ನ ಮನಸ್ಥಲದಲ್ಲಿ ಬೆಳಗಿ ತೋರಿದೆಯಾಗಿ
ಇದು ಕಾರಣ ಕೂಡಲ ಚನ್ನಸಂಗಯ್ಯ
'ಓಂ ನಮಃ ಶಿವಾಯ ಬಸವ' ಗುರುವೆ
ಶರಣು ಶರಣೆನುತಿರ್ದೆನು

ಎಂದು ಪ್ರಣವ ಪಂಚಾಕ್ಷರಿ ಮಂತ್ರಕ್ಕೆ ಬಸವ ಎಂಬ ಮೂರಕ್ಷರಗಳ ಸೇರ್ಪಡೆ ಮಾಡಿ 'ಓಂ ನಮಃ ಶಿವಾಯ ಬಸವ' ಎಂಬ ನವಲಿಂಗ ಸಕೀಲ ಮಂತ್ರವನ್ನು ಜಾರಿಗೆ ತಂದಾತ ಮಹಾಜ್ಞಾನಿ, ಸುಜ್ಞಾನಿ ಚೆನ್ನಬಸವಣ್ಣ ಎಂಬುದನ್ನು ಕಾಣುತ್ತೇವೆ. 'ಸಂಸಾರ ಭ್ರಾಂತಿಯನಳಿಯದ, ಸಂಪ್ರದಾಯದ ಕಟ್ಟು ಪಾಡಿನಲ್ಲಿಯೇ ಉಳಿದಿದ್ದ ಶಿವಾಗಮಾಚಾರ್ಯ ಶಿವದೇವನು ಈ ಸಂಸ್ಕಾರ ವ್ಯವಸ್ಥೆಯಿಂದ ಗೊಂದಲಕ್ಕೆ ಒಳಗಾಗಿ ಸ್ವಲ್ಪ ಕಾಲ ದೂರವೇ ಉಳಿದನು.

ಬಸವಣ್ಣನವರು ತಮ್ಮ 'ಇಷ್ಟಲಿಂಗ' ಸಾಧನೆಯ ವಿಚಾರವನ್ನು ತಮ್ಮ ಗುರುಕುಲದ ಗುರುಗಳಾದ ಈಶಾನ್ಯಗುರುಗಳ ಮುಂದೆ ವಿವರಿಸಿದರು. ವಯೋವೃದ್ಧ ಗುರುಗಳು ಬಸವಣ್ಣನವರ ಕ್ರಾಂತಿಕಾರಕ ವಿಚಾರಗಳನ್ನು ತಿಳಿದು ಆಶ್ಚರ್ಯ-ಚಕಿತರಾದರು. ಇಲ್ಲಿಯವರೆಗೆ ಸಂಗಮೇಶ್ವರ ದೇವಾಲಯದ ಸ್ಥಾನಾಧಿಪತಿಗಳಾಗಿ, ಸ್ಥಾವರಲಿಂಗದ ಪೂಜೆ-ಅರ್ಚನೆಗಳಲ್ಲಿ ತೊಡಗಿಸಿಕೊಂಡವರಾಗಿದ್ದವರು, ಬಸವಣ್ಣನವರ ಹೊಸ ಯೋಜನೆಗಳು, ಚಿಂತನೆಗಳನ್ನು ಕಂಡು ಅಭಿಮಾನ ಪಟ್ಟರಾದರೂ ಸಾವಿರಾರು ವರುಷಗಳಿಂದ ಸಾಗಿ ಬಂದಿದ್ದ, ಶೈವದ (ಪಾಶುಪತ

ಶೈವಸಿದ್ಧಾಂತ) ಪರಂಪರೆಯಿಂದ ಹೊರಬರಲು ಸಾಧ್ಯವಾಗದಿದ್ದರೂ, ಬಸವಣ್ಣನವರಿಗೆ ಧೈರ್ಯದಿಂದ ಮುಂದುವರೆಯಲು ತಿಳಿಸಿದರು. 'ಬಸವಣ್ಣಾ ನಿನ್ನ ಯೋಜನೆಗಳು ಕಾರ್ಯರೂಪಕ್ಕೆ ಬರಬೇಕಾದರೆ, ನೀನು ಮಂಗಳವಾಡಕ್ಕೆ ಹೋಗಬೇಕು. ಅಲ್ಲಿ ನಿನ್ನ ಸೋದರ ಮಾವಂದಿರಾದ ಬಲದೇವ, ಸಿದ್ಧರಸರು ಮಂತ್ರಿಗಳಾಗಿದ್ದಾರೆ. ಆಸ್ಥಾನದಲ್ಲಿ ಉದ್ಯೋಗ ಪಡೆದು, ಕಾರ್ಯರಂಗಕ್ಕೆ ಧುಮುಕಬೇಕು. ನಿನ್ನಲ್ಲಿ ಪ್ರತಿಭೆ ಇದೆ, ಜಾಣ್ಮೆ ಇದೆ, ಕಾರ್ಯಶಕ್ತಿ ಇದೆ, ಸಾಧನೆ ಮಾಡು' ಎಂದು ಹೇಳಿದರು.

ಬಸವಣ್ಣನವರು ಬಿಜ್ಜಳನ ಆಡಳಿತದ ಮಂಗಳವಾಡಿಗೆ ಹೋಗಲು ನಿರ್ಧರಿಸಿದರು. ಅವರೊಂದಿಗೆ ಅಕ್ಕನಾಗಮ್ಮ, ಚೆನ್ನಬಸವರೂ ಸಿದ್ಧರಾದರು. ಶಿವದೇವ ಮಾತ್ರ ಶಿವಾಗಮಪಂಡಿತನಾದ್ದರಿಂದ ದೇಶಪರ್ಯಟನೆಗೆ ಹೊರಟು ಹೋದನು.

ಬಸವಣ್ಣನವರು ಅಕ್ಕನಾಗಮ್ಮ ಹಾಗೂ ಸೋದರಳಿಯ ಚೆನ್ನಬಸವರನ್ನು ಕರೆದುಕೊಂಡು ಮಂಗಳವಾಡಿಯತ್ತ ಹೊರಡಲು ನಿರ್ಧರಿಸಿದರು. ಸ್ಥಾನಪತಿ-ಗಳಾಗಿದ್ದ ಈಶಾನ್ಯಗುರುಗಳು ಅವರ ಪಯಣಕ್ಕೆ ಅನುಕೂಲವಾಗಲು, ಆ ಗ್ರಾಮದ ತಮ್ಮ ಶಿಷ್ಯರಾಗಿದ್ದ ಜಮೀನುದಾರ ಸಂಗನಗೌಡರಿಗೆ ಹೇಳಿ, ಎತ್ತಿನ ಗಾಡಿಯ ವ್ಯವಸ್ಥೆ ಮಾಡಿದರು. ಬಂಡಿಯಲ್ಲಿ ಮನೆಯಲ್ಲಿಯ ಉಪಯುಕ್ತ ಕೆಲವು ಸಾಮಾನು-ಸರಂಜಾಮು ಹಾಗೂ ಇಲ್ಲಿಯವರೆಗೆ ಅಧ್ಯಯನ ಮಾಡುತ್ತಾ ಸಂಗ್ರಹಿಸಿದ್ದ ಅತ್ಯುಪಯುಕ್ತ ಗ್ರಂಥಗಳನ್ನು ಹೇರಿಕೊಂಡು ಮಂಗಳವಾಡಕ್ಕೆ ಪಯಣ ಬೆಳೆಸಿದರು.

ಸಂಗಮೇಶ್ವರದ ಗುರುಗಳು ತಮ್ಮ ಆತ್ಮೀಯ ಶಿಷ್ಯರಿಗೆ ಶುಭ ಹಾರೈಸಿ, ಬೀಳ್ಕೊಟ್ಟರು, ಕಪ್ಪಡಿಸಂಗಮದಿಂದ ಮಾರ್ಗಮಧ್ಯದ ಅನೇಕ ಗ್ರಾಮ ಪಟ್ಟಣಗಳು, ಮುದುವೊಳಲು, ಜಂಬುಖಂಡಿ, ವಿಜಯಪುರ,ಸೊನ್ನಲಿಗೆ ಮೂಲಕ ಒಂದು ವಾರ ಪಯಣ ಮಾಡಿ ಮಂಗಳವಾಡಿ ತಲುಪಿದರು. ಅಲ್ಲಿ ಸೋದರ ಮಾವ ಬಲದೇವ ಮಂತ್ರಿಗಳು ಪ್ರೀತಿಯಿಂದ ಬರಮಾಡಿಕೊಂಡು, ತಮ್ಮ ಮನೆಯಲ್ಲಿ ವಸತಿ ಕಲ್ಪಿಸಿದರು. ಗಂಗಾಂಬಿಕೆಯಂತೂ ಸೋದರತ್ತೆ ಅಕ್ಕನಾಗಮ್ಮಳನ್ನು ಗೌರವದಿಂದ ಉಪಚರಿಸುತ್ತಾ, ಬಾಲಕ ಚೆನ್ನಬಸವನೊಂದಿಗೆ ವಾತ್ಸಲ್ಯದ ಮಾತುಗಳನ್ನಾಡುತ್ತ, ಗಂಭೀರ ಯುವಕ ಬಸವಣ್ಣನವರೊಂದಿಗೆ ಪ್ರೀತಿ ಅಭಿಮಾನ ತೋರುತ್ತಾ, ಎಲ್ಲರನ್ನೂ ಆದರೋಪಚಾರ ಮಾಡಿದಳು.

ಬಲದೇವರು ತಮ್ಮ ಸೋದರಿ ಅಕ್ಕನಾಗಮ್ಮಳೊಂದಿಗೆ ಅಂತರಂಗದಲ್ಲಿ ಚರ್ಚಿಸಿ, ಗಂಗಾಂಬಿಕೆಯನ್ನು ಬಸವಣ್ಣನಿಗೆ ಕೊಟ್ಟು ಮದುವೆ ಮಾಡಲು ನಿರ್ಧರಿಸಿದರು. ಬಸವಣ್ಣನವರಿಗೆ ವಿಚಾರ ತಿಳಿಸಿದಾಗ ಮೊದಲು ತಾನು ಒಂದು ಉದ್ಯೋಗ ದೊರಕಿಸಿಕೊಳ್ಳಬೇಕು, ಅನಂತರ ಮುಂದಿನ ವಿಚಾರ ಎಂದು ಹೇಳಿದರು.

## ೪. ಮಂಗಳವಾಡದಲ್ಲಿ ಕಾಯಕ ಜೀವನ :

ಕಲ್ಯಾಣ ಚಾಲುಕ್ಯ ಸಾಮ್ರಾಜ್ಯದ ಮಾಂಡಲಿಕನಾಗಿದ್ದ ಬಿಜ್ಜಳನು ಮಹಾಮಂಡಳೇಶ್ವರನೆಂದು ಪ್ರಸಿದ್ಧಿಯಾಗಿದ್ದನು. ಚಾಲುಕ್ಯರ ಸಾಮಂತರಲ್ಲಿ ಬಿಜ್ಜಳನಿಗೆ ಬಹಳ ಗೌರವಿತ್ತು. ಚಾಲುಕ್ಯ ಸಾಮ್ರಾಟ ವಿಕ್ರಮಾದಿತ್ಯನ ಮಗಳ ಮಗನಾಗಿದ್ದರಿಂದ ವಿಶೇಷ ಸ್ಥಾನಮಾನ ಪ್ರಾಪ್ತಿಯಾಗಿದ್ದವು. ಈತನ ತಂದೆ ಪೆರ್ಮಾಡಿಯ ಕಾಲದಿಂದಲೂ ಆತನ ಆಸ್ಥಾನದಲ್ಲಿ ಇಂಗಳೇಶ್ವರದವರಾಗಿದ್ದ ಬಲದೇವ ಹಾಗೂ ಸಿದ್ಧರಸರು ಮಂತ್ರಿಗಳಾಗಿದ್ದರು. ಮಂಗಳವಾಡವು ತರ್ದವಾಡಿ ನಾಡಿನ ಪಟ್ಟಣವಾಗಿತ್ತು. ಕಲಚೂರಿ ವಂಶದ ಜೋಗಮ ಪೆರ್ಮಾಡಿ ಇವರ ನಂತರ ಬಿಜ್ಜಳನು ತರ್ದವಾಡಿ ೧೦೦೦ ಮೊದಲ್ಗೊಂಡು ಕರಹಾಡ ೪೦೦೦ ಪ್ರದೇಶವರೆಗೂ ಅಧಿಕಾರ ಹೊಂದಿದ್ದನು. ಶಾಸನಗಳಲ್ಲಿ ಈತನನ್ನು ' ಸುವರ್ಣ ವೃಷಭಧ್ವಜ ಪರಮ ಮಾಹೇಶ್ವರಂ' ಮುಂತಾಗಿ ಸ್ತುತಿಸಿರುವುದನ್ನು ನೋಡಿದರೆ ಈತನು ಪಾಶುಪತ ಶೈವ ಧರ್ಮದ ಅನುಯಾಯಿಯಾಗಿದ್ದನೆಂದು ತಿಳಿದು ಬರುತ್ತದೆ.

ಬಲದೇವ ಮಂತ್ರಿಗಳು ತಮ್ಮ ಸೋದರಳಿಯ ಸಕಲವಿದ್ಯಾಪಾರಂಗತ ಬಸವಣ್ಣನನ್ನುಕರೆದುಕೊಂಡು ಬಿಜ್ಜಳರಾಜನ ಆಸ್ಥಾನಕ್ಕೆ ಬಂದರು. ಆ ಸಮಯದಲ್ಲಿ ಬಿಜ್ಜಳ ರಾಜನು ತನ್ನ ಆಸ್ಥಾನದ ಕರಣಸಾಲೆಯ ಭಂಡಾರದ ಲೆಕ್ಕ ಪರಿಶೀಲನೆ ಯಲ್ಲಿದ್ದನು. ಗಣಕರು ಎಷ್ಟೇ ಪ್ರಯತ್ನಿಸುತ್ತಿದ್ದರೂ ಭಂಡಾರದ ಜಮಾ-ಖರ್ಚು ಹೊಂದಿಕೆಯಾಗುತ್ತಿರಲಿಲ್ಲ, ಅಪಾರ ಹೊನ್ನಿನ ಕೊರತೆ ಉಂಟಾಗುತ್ತಿತ್ತು. ಎಲ್ಲರೂ ರಾಜನ ಸಮ್ಮುಖದಲ್ಲಿ ಗೊಂದಲಕ್ಕೊಳಗಾಗಿ ತಡ-ಬಡಾಯಿಸುತ್ತಿದ್ದರು. ಇದನ್ನು ಸೂಕ್ಷವಾಗಿ ಗಮನಿಸುತ್ತಿದ್ದ ಸಕಲವಿದ್ಯಾಕೋವಿದ ಗಣಿತಶಾಸ್ತ್ರಜ್ಞ ಬಸವಣ್ಣನವರು, ತಾವು ಒಂದು ಸಲ ಭಂಡಾರದ ಲೆಕ್ಕಪತ್ರ ಪರಿಶೀಲಿಸುವುದಾಗಿ ವಿನಯದಿಂದ ಕೇಳಿಕೊಂಡರು. ಬಿಜ್ಜಳರಾಜನು ಹಾಗೂ ಮಂತ್ರಿಗಳು ಒಪ್ಪಿಗೆ ಇತ್ತಾಗ, ಗಣಕರು, ಕರಣಿಕರು ತಾವು ದಾಖಲಿಸಿದ ಹಣಕಾಸಿನ ವಿವರವನ್ನು ನೀಡಿದರು. ಎಲ್ಲ ತಾಡೋಲೆಗಳ ಕಟ್ಟುಗಳನ್ನು ಕೂಲಂಕಶವಾಗಿ ಪರಿಶೀಲಿಸುತ್ತಾ, ಮನದಲ್ಲಿಯೇ ಲೆಕ್ಕ ಹಾಕುತ್ತಾ, ಆಗಿರುವ ದೋಷ ತೋರಿಸಿ, ತಿದ್ದುಪಡಿ ಮಾಡಿಕೊಟ್ಟರು. ಭಂಡಾರದ ಲೆಕ್ಕ ಪತ್ರ ಹೊಂದಾಣಿಕೆಯಾಯಿತು. ಕೋಶಾಗಾರದ ಕರಣಿಕನೊಬ್ಬನ ದೋಷದಿಂದಾದ ಈ ಗೊಂದಲ ನಿವಾರಿಸಿದರು.ಯುವಕ ಬಸವಣ್ಣನವರ ಬುದ್ಧಿಮತ್ತೆಗೆ ತಲೆದೂಗಿದ ಬಿಜ್ಜಳರಾಜನು, ಈತ ಯಾರೆಂದು ಮಂತ್ರಿಗಳಿಗೆ ವಿಚಾರಿಸಿದಾಗ, 'ಕಪ್ಪಡಿಸಂಗಮದ ಗುರುಕುಲದಲ್ಲಿ ವಿದ್ಯಾರ್ಜನೆ ಪೂರೈಸಿ, ತಮ್ಮ ಆಸ್ಥಾನದಲ್ಲಿ ಉದ್ಯೋಗ ಅರಸಿಕೊಂಡು ಬಂದಿರುವ ತಮ್ಮ ಸೋದರಳಿಯ ಬಸವಣ್ಣ' ಎಂದು ಪರಿಚಯಿಸಿದರು.

### i) ಬಿಜ್ಜಳನ ಭಂಡಾರದಲ್ಲಿ ಕರಣಿಕ ಕಾಯಕ :

ಬಸವಣ್ಣನವರಿಗೆ ಅರ್ಥಶಾಸ್ತ್ರದಲ್ಲಿ ಪಾಂಡಿತ್ಯವಿರುವುದನ್ನು ಅರಿತುಕೊಂಡ ಬಿಜ್ಜಳ ರಾಜನು ತನ್ನ ಕೋಶಾಗಾರದಲ್ಲಿ 'ಕರಣಿಕ' ನಾಗಿ ವೃತ್ತಿ ಪ್ರಾರಂಭಿಸಲು ನೇಮಿಸಿಕೊಂಡನು. ಇದರಿಂದಾಗಿ ಬಸವಣ್ಣನವರು ನಿರಾಳರಾದರು. ಸ್ವಲ್ಪೇ ಸಮಯದಲ್ಲಿ ತಮ್ಮ ಶ್ರದ್ಧೆ-ನಿಷ್ಠೆ-ಪ್ರಾಮಾಣಿಕತೆಯಿಂದ ತಮ್ಮ ಉಪಜೀವನ ವೃತ್ತಿಯನ್ನು 'ಸತ್ಯ ಶುದ್ಧ ಕಾಯಕ' ವನ್ನಾಗಿಸಿಕೊಂಡರು. ಕಾಯಕದಿಂದ ಬಂದ ಕಾರೆಯ ಸೊಪ್ಪಾದರೂ ಅದು ಲಿಂಗಾರ್ಪಿತವಾಗಿ ಪ್ರಸಾದವಾಗುವುದೆಂದು ಅರಿತರು. ಕಾಯಕ ಪ್ರಾರಂಭವಾದ ಬಳಿಕ ಪ್ರತಿಫಲವಾಗಿ 'ನೂರೊಂದು ಬಂಗಾರದ ನಾಣ್ಯ' ಗಳು ಪ್ರತಿ ತಿಂಗಳ ವೇತನವಾಗಿ ದೊರೆಯಲು ಪ್ರಾರಂಭವಾಯಿತು. ಬಸವಣ್ಣನವರು ಅಕ್ಕನಾಗಮ್ಮನೊಂದಿಗೆ ಮಾತನಾಡಿ ಭಂಡಾರದ 'ಕರಣಿಕ' ಕಾಯಕದವರಿಗಾಗಿ ನಿರ್ಮಿಸಿದ್ದ ನಿವಾಸಕ್ಕೆ ಹೋಗಲು ನಿರ್ಧರಿಸಿದರು.

### ii) ಬಸವಣ್ಣನವರ ಕಲ್ಯಾಣ ಮಹೋತ್ಸವ :

ಬಸವಣ್ಣನವರು 'ಕರಣಿಕ' ಕಾಯಕ ಪ್ರಾರಂಭಿಸಿದ ನಂತರ, ಸೋದರ ಮಾವ ಬಲದೇವ ಮಂತ್ರಿಯು ತನ್ನ ಮಗಳು ಗಂಗಾಂಬಿಕೆಯನ್ನು ಸೋದರಳಿಯ ಬಸವಣ್ಣನಿಗೆ ಕೊಟ್ಟು ಕಲ್ಯಾಣ ಮಹೋತ್ಸವ ನೆರವೇರಿಸಿದನು. ಗಂಗಾಂಬಿಕೆಯು ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾಗಿ ಬೆಳೆದವಳಾಗಿದ್ದಳು. ತಂದೆಯ ಒಡನಾಟದಲ್ಲಿ ಧೈರ್ಯ-ಸಾಹಸಗಳನ್ನು ಬೆಳಸಿಕೊಂಡಿದ್ದಳು. ಕತ್ತಿವರಸೆ, ಮುಂತಾದ ಶಸ್ತ್ರಾಭ್ಯಾಸದಲ್ಲಿಯೂ ನಿಪುಣಗಳಾಗಿದ್ದಳು. ಮನೆಯಲ್ಲಿಯೇ ತಂದೆಯವರಿಂದ ಓದು-ಬರಹ ಕಲಿತಿದ್ದಳು. ಅಡಿಗೆ ಮಾಡುವುದರಲ್ಲಿ ಸಿದ್ಧಹಸ್ತಳಾಗಿದ್ದಳು. ಮದುವೆಯ ನಂತರ ಬಲದೇವ ಮಂತ್ರಿಯು ಎಷ್ಟೇ ಒತ್ತಾಯಿಸಿದರೂ ಮಾವನ ಮನೆಯಲ್ಲಿ ಉಳಿಯದೇ ಸ್ವತಂತ್ರವಾದ ಮನೆ ಮಾಡಿ, ತನ್ನ ಪರಿವಾರವನ್ನು ಕರೆದುಕೊಂಡು ಹೋಗಿ ಸ್ವಾವಲಂಬನೆಯ ಬದುಕನ್ನು ಬಸವಣ್ಣನವರು ಸಾಗಿಸಿದರು.

ಬಸವಣ್ಣನವರು ಮಂಗಳವಾಡದಲ್ಲಿ ತಮ್ಮ ಕಾಯಕ ಪೂರೈಸಿ ಬಂದನಂತರ ಪ್ರತಿ ದಿನ ಸಾಯಂಕಾಲ ತಮ್ಮ ಮನೆಯಲ್ಲಿ **'ಅನುಭಾವ ಗೋಷ್ಠಿ'** ಪ್ರಾರಂಭಿಸಿದರು, ಕಲ್ಯಾಣ ಮಹೋತ್ಸವ ಪೂರ್ವದಲ್ಲಿ ಗಂಗಾಂಬಿಕೆಯು ಕೂಡ ಅಕ್ಕನಾಗಮ್ಮನವರ ಇಚ್ಛೆಯಂತೆ 'ಇಷ್ಟಲಿಂಗ ದೀಕ್ಷೆ' ಯನ್ನು ಪಡೆದುಕೊಂಡಿದ್ದಳು. ಹೀಗಾಗಿ ಬಸವಣ್ಣನವರ ಮನೆಯಲ್ಲಿ ಅಕ್ಕನಾಗಮ್ಮ, ಬಸವಣ್ಣ, ಗಂಗಾಂಬಿಕೆ, ಚೆನ್ನಬಸವಣ್ಣನವರಿಂದ ವಚನ ಭಜನೆ, ವಚನಗಳ ಅನುಭಾವ, ಚರ್ಚೆ ನಡೆಯ- ತೊಡಗಿದ್ದರಿಂದ, ಇವರ ಪ್ರಭಾವಲಯಕ್ಕೆ ಬಂದ ಅನೇಕ ಶಿವಭಕ್ತರು ಬಂದು

ಗೋಷ್ಠಿಯಲ್ಲಿ ಭಾಗವಹಿಸತೊಡಗಿದ್ದರು. ಪ್ರಾರಂಭದಲ್ಲಿ ಕಪ್ಪಡಿಸಂಗಮ ಪ್ರಾಂತದವರಾಗಿದ್ದ ಹಡಪದ ಅಪ್ಪಣ್ಣ, ಲಿಂಗಮ್ಮರು, ಭಂಡಾರದ ಕೋಶಾಧಿಕಾರಿ-ಯಾಗಿದ್ದ ಸೊಡ್ಡಳ ಬಾಚರಸರು, ಹಾಗೂ ಗಂಗಾಂಬಿಕೆಯ ಚಿಕ್ಕಪ್ಪ ಸಿದ್ಧರಸ ಮಂತ್ರಿಯ ಮಗಳಾದ ನೀಲಾಂಬಿಕೆ ಮುಂತಾದವರು ಬಂದು ಪಾಲ್ಗೊಳ್ಳುತ್ತಿದ್ದರು. ನೀಲಾಂಬಿಕೆಯು ಸುಶ್ರಾವ್ಯವಾಗಿ ಬಸವಣ್ಣ, ಅಕ್ಕನಾಗಮ್ಮ, ಚೆನ್ನಬಸವಣ್ಣನವರು ರಚಿಸಿದ್ದ ವಚನಗಳನ್ನು ಹಾಡುತ್ತಿದ್ದಳು. ನೀಲಾಂಬಿಕೆಯು ಹೃದಯದಲ್ಲಿಯೇ ಗುಪ್ತವಾಗಿ ಬಸವಣ್ಣನವರನ್ನು ಆರಾಧಿಸುತ್ತಿದ್ದಳು.

ಸಿದ್ಧರಸಮಂತ್ರಿಯು ಬಿಜ್ಜಳನ ತಂದೆ ಪೆರ್ಮಾಡಿಯ ಕಾಲದಿಂದಲೂ ದಂಡನಾಯಕರಾಗಿ ಸೇವೆಯಲ್ಲಿದ್ದವರಾಗಿದ್ದರು. ಸಿದ್ಧರಸನ ಧರ್ಮಪತ್ನಿ ಪದ್ಮಗಂಧಿಯು, ಪೆರ್ಮಾಡಿ ರಾಜನ ಪತ್ನಿಯ ಮರಣಾನಂತರ ಆತನ ಮಕ್ಕಳಾದ ಬಿಜ್ಜಳ ಹಾಗೂ ಶಿಶು ಕರ್ಣದೇವನನ್ನು ತನ್ನ ಮಗಳು ನೀಲಲೋಚನೆ (ಬಾಲ್ಯದ ಹೆಸರು ಮಾಯಿದೇವಿ)ಯೊಂದಿಗೆ ಜೋಪಾನ ಮಾಡಿ ಬೆಳೆಸಿದ್ದಳು. ಹೀಗಾಗಿ ನೀಲಾಂಬಿಕೆಯು ಬಾಲ್ಯದಿಂದಲೇ ಬಿಜ್ಜಳನ ಸಾಕುತಂಗಿಯಾಗಿಯೇ ಬೆಳೆದಳು. ಸಿದ್ಧರಸ-ಪದ್ಮಗಂಧಿಯರ ನಿಧನದ ನಂತರ ಬಿಜ್ಜಳನ ಅರಮನೆಯಲ್ಲಿ ವಿದ್ಯೆ-ಸಂಗೀತ ಕಲಿಯುತ್ತ ಬೆಳೆದು ದೊಡ್ಡವಳಾದಳು.

ಬಸವಣ್ಣನವರ ಕಾಯಕ ನಿಷ್ಠೆ, ಭಂಡಾರದ ಅಭಿವೃದ್ಧಿಯನ್ನು ಕಂಡ ಬಿಜ್ಜಳರಾಜನು ಮಂಗಳವಾಡಿಯಲ್ಲಿಯೇ ಬಲದೇವರಸನ ನಿಧನಾನಂತರ, ತನ್ನ ಅರ್ಥಕೋಶದ ಅಂದರೆ ಭಂಡಾರದ ಮಂತ್ರಿಯಾಗಿ ಮಾಡಿದನು. ಬಲದೇವ ಮಂತ್ರಿಯ ವಿಶಾಲವಾದ ನಿವಾಸಕ್ಕೆ ಬಸವಣ್ಣನವರ ಕುಟುಂಬ ಪರಿವಾರ ಸ್ಥಳಾಂತರಗೊಂಡಿತು. ಬಸವಣ್ಣನವರು ಮಂಗಳವಾಡಿ ಪ್ರಾಂತದಲ್ಲಿ ಪ್ರಜೆಗಳ ಕಲ್ಯಾಣಕ್ಕಾಗಿ ಹಲವಾರು ಕಾಯಕ ಯೋಜನೆಗಳನ್ನು ರೂಪಿಸಿ, ಬಿಜ್ಜಳ ರಾಜನ ಅನುಮತಿ ಪಡೆದು ಭಂಡಾರದ ಸಂಪತ್ತನ್ನು ಸದ್ ಬಳಕೆಯಾಗುವಂತೆ ಮಾಡತೊಡಗಿದ್ದರು. ಬಲದೇವಮಂತ್ರಿಯ ನಿಧನಾನಂತರ ಬಂದ ಸಂಪತ್ತನ್ನು ಶರಣರ ದಾಸೋಹ-ಪ್ರಸಾದಕ್ಕೆ ವಿನಿಯೋಗಿಸತೊಡಗಿದರು.

ನೀಲಾಂಬಿಕೆಯು ಮದುವೆ ವಯಸ್ಸಿಗೆ ಬಂದಾಗ, ಬಿಜ್ಜಳ ರಾಜನು ಅಣ್ಣನಾಗಿ ತನ್ನ ಕರ್ತವ್ಯ ನಿಭಾಯಿಸಲು ಯೋಚಿಸಿದನು. ಗಂಗಾಂಬಿಕೆ-ನೀಲಾಂಬಿಕೆಯರ ಆತ್ಮೀಯ ಒಡನಾಟ ಆತನ ಗಮನಕ್ಕೆ ಬಂದಿತ್ತು. ನೀಲಾಂಬಿಕೆಯ ಕಂಗಳಲ್ಲಿ ಬಸವಣ್ಣನವರ ಬಗೆಗಿನ ಒಲುಮೆಯನ್ನು ಸೂಕ್ಷ್ಮವಾಗಿ ಗುರುತಿಸಿದ್ದನು. ಒಂದು ದಿನ ಅರಮನೆಯ ಪರಿವಾರದೊಂದಿಗೆ ಪತ್ನಿ ಸಮೇತನಾಗಿ ಬಿಜ್ಜಳನು, ಬಸವಣ್ಣನವರ ಮನೆಗೆ ಆಗಮಿಸಿ, ಅಕ್ಕನಾಗಮ್ಮ-ಬಸವಣ್ಣ-ಗಂಗಾಂಬಿಕೆಯರ ಸಮ್ಮುಖದಲ್ಲಿ ತನ್ನ ತಂಗಿ ನೀಲಾಂಬಿಕೆ (ಮಾಯಿದೇವಿ)ಯ ಮದುವೆ ಪ್ರಸ್ತಾಪವನ್ನು

ಮಾಡಿದನು. ಬಸವಣ್ಣನವರು ಮೌನವಾದರು. ಅಕ್ಕನಾಗಮ್ಮನವರೂ ಕೂಡ ನೀಲಾಂಬಿಕೆಯಲ್ಲಿ ಬಸವಣ್ಣನವರ ಕುರಿತಾದ ಪ್ರೇಮವನ್ನು ಅರಿತಿದ್ದರು. ಗಂಗಾಂಬಿಕೆಯಂತೂ ತುಂಬಾ ಸಂತಸಪಟ್ಟಳು. ಬಾಲ್ಯದಿಂದಲೂ ಇಬ್ಬರೂ ಎರಡು ದೇಹ ಒಂದು ಆತ್ಮದಂತೆಯೇ ಬೆಳೆದಿದ್ದರು. ಬಿಜ್ಜಳರಾಜನು ರಾಜಕೀಯ ಮುತ್ಸದ್ಧಿ ರಾಜ್ಯ ವಿಸ್ತಾರದ ಮಹತ್ವಾಕಾಂಕ್ಷಿಯಾಗಿದ್ದುದರಿಂದ ಈ ಮದುವೆ ಮಾಡಿ ಬಸವಣ್ಣನವರನ್ನು ತನ್ನ ಅಂತರಂಗಕ್ಕೆ, ಆಪ್ತಬಳಗಕ್ಕೆ ಸೇರಿಸಿಕೊಳ್ಳಲು ನಿರ್ಧರಿಸಿಯೇ ಬಂದಿದ್ದನು. ಆಗಿನ ಕಾಲದಲ್ಲಿ ರಾಜ-ಮಹಾರಾಜರಲ್ಲಿ, ಮಂತ್ರಿ ಮಹೋದಯರಲ್ಲಿ ಜಮೀನುದಾರರಲ್ಲಿ 'ಬಹುಪತ್ನಿತ್ವ' ಸಾಮಾನ್ಯ ಪದ್ಧತಿಯಾಗಿತ್ತು. ಅಕ್ಕನಾಗಮ್ಮ ಮೊದಲ್ಗೊಂಡು ಎಲ್ಲರೂ ಬಿಜ್ಜಳನು ತಂದ ಪ್ರಸ್ತಾವ ಒಪ್ಪಿಕೊಂಡರು. ಮಂಗಳವಾಡಿಯ ಬಿಜ್ಜಳನ ಅರಮನೆಯಲ್ಲಿ ವೈಭವದಿಂದ ಬಸವಣ್ಣ-ನೀಲಾಂಬಿಕೆಯರ ಕಲ್ಯಾಣಮಹೋತ್ಸವವೂ ಜರುಗಿತು.

### iii) ಮಂಗಳವಾಡದಲ್ಲಿ ಅನುಭಾವ ಗೋಷ್ಠಿ :

ಮಹಾಮನೆಯ ಮಹಾತಾಯಿ ಅಕ್ಕನಾಗಮ್ಮನವರ ಮಾತೃವಾತ್ಸಲ್ಯದಲ್ಲಿ ಗಂಗಾಂಬಿಕೆ-ನೀಲಾಂಬಿಕೆಯರು ಮಿಂದರು. ಬಸವಣ್ಣನವರ ಕ್ರಿಯಾಶಕ್ತಿ-ಜ್ಞಾನಶಕ್ತಿಯಾಗಿ ಅವರ ಚಿಂತನೆಗಳಿಗೆ ಯೋಚನೆಗಳಿಗೆ ಬೆಂಬಲವಾಗಿ ನಿಂತರು. ನೀಲಾಂಬಿಕೆಯೂ ತನ್ನ ಅನುಭವಗಳನ್ನು ವಚನರೂಪದಲ್ಲಿ ಬರೆಯ ತೊಡಗಿದ್ದಳು.ಬಾಲ್ಯದಲ್ಲಿಯೇ ತಂದೆ-ತಾಯಿಯರನ್ನು ಕಳೆದುಕೊಂಡಿದ್ದ ಗಂಗಮ್ಮ-ನೀಲಮ್ಮರಿಗೆ ಅಕ್ಕನಾಗಮ್ಮನವರು ತಾಯಿಯಾಗಿ ವಾತ್ಸಲ್ಯ ನೀಡಿದರು. ನೀಲಮ್ಮಳು ತನ್ನದೊಂದು ವಚನದಲ್ಲಿ ಸ್ಮರಿಸಿರುವುದನ್ನು ಕಾಣುತ್ತೇವೆ.

ಎನಗೆ ಹಾಲೂಟವನಿಕ್ಕುವ ತಾಯೆ
ಎನಗೆ ಪರಿಣಾಮವ ತೋರುವ ತಾಯೆ
ಪರಮಸುಖದೊಳಗಿಪ್ಪ ತಾಯೆ
ಪರವಸ್ತುವ ನಂಬಿದ ತಾಯೆ
ಬಸವನ ಗುರುತಾಯೆ
ಸಂಗಯ್ಯನಲ್ಲಿ ಸ್ವಯಲಿಂಗಿಯಾದ
ಅಕ್ಕನಾಗಮ್ಮ ತಾಯೆ.

ಅಕ್ಕನಾಗಮ್ಮ ತಾಯಿಯ ಅಕ್ಕರೆಯಲ್ಲಿ, ನೀಲಾಂಬಿಕೆ-ಗಂಗಾಂಬಿಕೆಯರು ಬಸವಣ್ಣ- ಚೆನ್ನಬಸವಣ್ಣನವರು ಬೆಳೆಯತೊಡಗಿದ್ದರು, ಬಸವಣ್ಣನವರ ಕಾರ್ಯವಿಸ್ತಾರ ಬೆಳೆದಂತೆ, ಅವರ ಕೀರ್ತಿಯೂ ಪಸರಿಸತೊಗಿತು. ತರ್ದೆವಾಡಿ ಪ್ರಾಂತದ ಗ್ರಾಮಗಳಿಂದ ಪ್ರತಿದಿನ ಅಧ್ಯಾತ್ಮದ ಹಸಿವುಳ್ಳ ಜನರು ಬರತೊಡಗಿದರು.

ಅನುಭಾವಗೋಷ್ಠಿಯಲ್ಲಿ ವಚನ ಪ್ರವಚನ ಆಲಿಸತೊಡಗಿದರು. ಚೆನ್ನಬಸವಣ್ಣನನ್ನು ಕಪ್ಪಡಿಸಂಗಮದ ಗುರುಕುಲಕ್ಕೆ ವಿದ್ಯಾರ್ಜನೆಗೆ ಕಳಿಸಿಕೊಟ್ಟರು. ಈಶಾನ್ಯಗುರುಗಳ ಮಾರ್ಗದರ್ಶನದಲ್ಲಿ ಆತನೂ ಪ್ರತಿಭಾವಂತ ವಿದ್ಯಾರ್ಥಿಯಾಗಿ, ಜ್ಞಾನಾರ್ಜನೆ ಮಾಡತೊಡಗಿದನು.

### iv) ಮಂಗಳವಾಡದಿಂದ ಕಲ್ಯಾಣಕ್ಕೆ :

ಬಸವಣ್ಣನವರು ಮಂಗಳವಾಡಿಯಲ್ಲಿ ಐದಾರು ವರ್ಷಗಳ ಕಾಲ ತುಂಬಾ ದಕ್ಷತೆಯಿಂದ ಬಿಜ್ಜಳನ ಭಂಡಾರದ ಕೋಶಾಧಿಕಾರಿ (ಮಂತ್ರಿ)ಯಾಗಿ ಕಾರ್ಯನಿರ್ವಹಿಸಿ, ರಾಜ್ಯದ ಸಂಪತ್ತು ಹೆಚ್ಚಿಸಿದರು. ತರ್ದವಾಡಿ ಪ್ರಾಂತವು ಸುಭಿಕ್ಷವಾಯಿತು, ಪ್ರಜೆಗಳು ನೆಮ್ಮದಿಯಿಂದ ತಮ್ಮ ತಮ್ಮ ಕಾಯಕಗಳನ್ನು ನಿರ್ವಹಿಸುತ್ತ ಸುಖೀ ಜೀವನ ಬಾಳುವಂತಾಯಿತು. ಕೆರೆ, ಕಾಲುವೆ, ಹೊಂಡಗಳ ನಿರ್ಮಾಣದಿಂದಾಗಿ ನೀರಿನ ಸೌಕರ್ಯ, ಹೊಲ-ತೋಟಗಳ ಫಸಲು ಚೆನ್ನಾಗಿ ಬರತೊಡಗಿತು. ರೈತರ ಬೆಳೆಗಳಿಗೆ, ಅವರ ಉತ್ಪನ್ನಗಳಿಗೆ ಯೋಗ್ಯ ಬೆಲೆ ಸಿಗತೊಡಗಿತು. ಪ್ರಜೆಗಳು ಪ್ರಾಮಾಣಿಕವಾಗಿ ಆದಾಯ ಕರ ಕಟ್ಟ ತೊಡಗಿದರು. ಇದರಿಂದ ರಾಜ್ಯವು ಸುಖೀ ರಾಜ್ಯವಾಯಿತು.

ಚಾಲುಕ್ಯ ಸಾಮ್ರಾಜ್ಯದ ಎಲ್ಲ ಮಾಂಡಲಿಕರಲ್ಲಿ ಬಿಜ್ಜಳನ ಪ್ರಾಂತದ ಬಗ್ಗೆ, ಅಲ್ಲಿಯ ದಕ್ಷ ಆಡಳಿತದ ಬಗ್ಗೆ, ಸಂಪತ್ತಿನ ಅಭಿವೃದ್ಧಿ ಬಗ್ಗೆ ಕೀರ್ತಿ ವಾರ್ತೆ ಹಬ್ಬಿತು. ಅತ್ತ ರಾಜಧಾನಿ ಕಲ್ಯಾಣದಲ್ಲಿ ಚಾಲುಕ್ಯ ಚಕ್ರವರ್ತಿ ಮೂರನೇ ತೈಲಪನು ಭೋಗಾಸಕ್ತಿಯಲ್ಲಿ ಮೈಮರೆತು ಆಡಳಿತದ ಕಡೆಗೆ ಗಮನ ಕಡಿಮೆ ಮಾಡಿದಾಗ, ಕೆಲವು ಮಾಂಡಲಿಕರು ದಂಗೆ ಏಳತೊಡಗಿದರು. ಆಡಳಿತದ ಮೇಲಿನ ಹಿಡಿತ ತಪ್ಪಿದ್ದರಿಂದ ಅಲ್ಲಲ್ಲಿ ಅರಾಜಕತೆ ಉಂಟಾಗತೊಡಗಿತು. ಇದನ್ನು ಮನಗಂಡ ತರ್ದವಾಡಿ ಪ್ರಾಂತದ ಮಾಂಡಲಿಕ ಬಿಜ್ಜಳರಾಜನೇ ಮೇಲಿಂದ ಮೇಲೆ ಕಲ್ಯಾಣಕ್ಕೆ ಹೋಗಿ, ರಾಜಧಾನಿಯ ಆಡಳಿತ, ಹಾಗೂ ಮಾಂಡಲಿಕರ ಮೇಲೆ ಹಿಡಿತ ಸಾಧಿಸುತ್ತಾ ಬಂದಿದ್ದರಿಂದ ಸಮಸ್ತ ಪ್ರಜೆಗಳೂ ಕೂಡ ತೈಲಪನ ಸ್ಥಾನದಲ್ಲಿ ಬಿಜ್ಜಳನೇ ಚಕ್ರವರ್ತಿಯಾದರೆ ಒಳ್ಳೆಯದೆಂಬ ಅಭಿಪ್ರಾಯ ತಾಳತೊಡಗಿದರು.

ರಾಜಕೀಯ ಮಹಾತ್ವಾಕಾಂಕ್ಷಿಯಾಗಿದ್ದ ಬಿಜ್ಜಳನು ಅಶಕ್ತ, ಭೋಗವಾದಿ, ದುರ್ಬಲ ತೈಲಪನನ್ನು ಚಕ್ರವರ್ತಿ ಹುದ್ದೆಯಿಂದ ಕೆಳಗಿಳಿಸಿ, ಆತನನ್ನು ಗೃಹ ಬಂಧನದಲ್ಲಿರಿಸಿ, ತಾನೇ ಚಾಲುಕ್ಯ ಸಾಮ್ರಾಜ್ಯದ ಚಕ್ರವರ್ತಿಯಾದನು. ಮಂಗಳವಾಡಿಯಲ್ಲಿದ್ದ ದಕ್ಷ ಆಡಳಿತ ಅನುಭವ ಹೊಂದಿದ್ದ ಮಂತ್ರಿಗಳು, ಅಧಿಕಾರಿಗಳನ್ನು ರಾಜಧಾನಿ ಕಲ್ಯಾಣಕ್ಕೆ ಕರೆತಂದು ಕೆಲವು ಪ್ರಮುಖ ಸ್ಥಾನಗಳಿಗೆ ನೇಮಿಸಿದನು. ಅದರಂತೆ ದಕ್ಷ ಕೋಶಾಧಿಕಾರಿಯಾಗಿ ರಾಜಭಂಡಾರದ

ಕಾರ್ಯನಿರ್ವಹಿಸುತ್ತಿದ್ದ ಬಸವಣ್ಣನವರನ್ನು ಚಾಲುಕ್ಯ ಸಾಮ್ರಾಜ್ಯದ ಭಂಡಾರದ ಮಂತ್ರಿಯಾಗಿ ಮಾಡಿದನು. ಬಸವಣ್ಣನವರು ತಮ್ಮ ಪರಿವಾರ ಸಮೇತ ಕಲ್ಯಾಣಕ್ಕೆ ಬರುವಂತಾಯಿತು.

ಬಸವಣ್ಣನವರು ಮಂಗಳವಾಡಿಯಲ್ಲಿದ್ದ ಐದಾರು ವರುಷಗಳ ಕಾಲ (ಕ್ರಿ.ಶ.೧೧೨೬ ರಿಂದ ೧೧೩೧) ಅವರ ಒಡನಾಟ, ಸಂಪರ್ಕದಲ್ಲಿದ್ದ ತರ್ದೆವಾಡಿ ಪ್ರಾಂತದ ವಿವಿಧ ಕಾಯಕಗಳ ಅನುಭಾವಿ ಶರಣ-ಶರಣೆಯರೂ ಕೂಡ ಬಸವಣ್ಣನವರೊಂದಿಗೆ ಕಲ್ಯಾಣಕ್ಕೆ ಬಂದು ನೆಲೆಸಿದರು. ಬಸವಣ್ಣನವರು ಮನೆಯ ಪರಿವಾರದವರಾದ ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆಯವರೊಂದಿಗೆ ರಾಜಧಾನಿ ಮಹಾನಗರ ಕಲ್ಯಾಣಕ್ಕೆ ಬಂದು ನೆಲೆಸಿದರು.

ಕಲಚೂರಿ ಬಿಜ್ಜಳರಾಜನು ಈಗ ಚಾಲುಕ್ಯ ಸಾಮ್ರಾಜ್ಯದ ಚಕ್ರವರ್ತಿಯಾದ್ದರಿಂದ ಚಾಲುಕ್ಯವಂಶದ ನಿಷ್ಠೆಯಿದ್ದ ಕೆಲವು ಅಧಿಕಾರಿ, ಮಾಂಡಲಿಕರು ಅಸಮಾಧಾನವಿದ್ದರೂ, ಹೊರಗೆ ತೋರಿಸಿಕೊಳ್ಳದೆ, ಸುಮ್ಮನಾದರು.

## ೫. ಕಲ್ಯಾಣರಾಜ್ಯದಲ್ಲಿ ಬಸವಣ್ಣನವರ ಸಾಧನೆಗಳು :

ಚಾಲುಕ್ಯ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಕಲ್ಯಾಣನಗರವು ಅಂದಿನ ಕಾಲದಲ್ಲಿ ಹತ್ತು ಲಕ್ಷ ಮೇಲ್ಪಟ್ಟ ಜನಸಂಖ್ಯೆಯುಳ್ಳ ಮಹಾನಗರವಾಗಿತ್ತು. ಇದು ತೈಲಪ, ಸೋಮೇಶ್ವರ, ೬ ನೇ ವಿಕ್ರಮಾದಿತ್ಯ, ಜಗದೇಕಮಲ್ಲರಂತಹ ಚಕ್ರವರ್ತಿಗಳು ಆಳಿದ ನಾಡಾಗಿತ್ತು. ಇಡೀ ದಕ್ಷಿಣಭಾರತವನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡು, ಉತ್ತರಭಾರತವನ್ನೂ ಗೆದ್ದು ಅಲ್ಲಿ ತನ್ನ ಪ್ರತಿನಿಧಿ ರಾಜರನ್ನು ನೇಮಿಸಿದ್ದ ಭುಜಬಲ ಚಕ್ರವರ್ತಿ ೬ ನೇ ವಿಕ್ರಮಾದಿತ್ಯ ಮಹಾಸಾಮ್ರಾಟರ ರಾಜಧಾನಿಯಾಗಿತ್ತು 'ಆಸೀದಸ್ತಿ ಭವಿಷ್ಯತಿ ಕ್ಷಿತಿ ತಲೇ ಕಲ್ಯಾಣ ಕಲ್ಪಪುರಂ' ಎಂದು ಪ್ರಾಚೀನ ಕವಿಯು ವರ್ಣಿಸಿದಂತೆ ಕಲ್ಯಾಣದಂತಹ ಮಹಾನಗರ ಹಿಂದೆಯೂ ಇರಲಿಲ್ಲ, ಮುಂದೆಯೂ ಇರಲಾರದು ಎಂಬಂತಹ ಹೆಸರುವಾಸಿ ರಾಜಧಾನಿಯಾಗಿತ್ತು. ಬಿಲ್ಹಣ, ವಿಜ್ಞಾನೇಶ್ವರ, ಸೋಮೇಶ್ವರ ಮುಂತಾದ ವಿಖ್ಯಾತ ಕವಿ, ಗ್ರಂಥಕಾರರು ಆಗಿಹೋಗಿದ್ದ ನಾಡಾಗಿತ್ತು.

ಇಂತಹ ಅದ್ಭುತ ಕಲ್ಯಾಣ ಸಾಮ್ರಾಜ್ಯವು ಮೂರನೆಯ ತೈಲಪನಂತಹ ದುರ್ಬಲ, ಭೋಗವಾದಿ ಚಕ್ರವರ್ತಿಯ ಆಡಳಿತಕಾಲದಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ ಅಸ್ಥಿರಗೊಂಡಿತ್ತು. ಪ್ರಜೆಗಳಲ್ಲಿ ಹಾಹಾಕಾರ, ಅಸಮಾಧಾನದ ಹೊಗೆ ಏಳತೊಡಗಿತ್ತು. ಅಲ್ಲಲ್ಲಿ ದೂರ ಪ್ರಾಂತಗಳ ಮಾಂಡಲಿಕರು ದಂಗೆಯೆದ್ದು ಸ್ವತಂತ್ರರಾಗಲು ಹವಣಿಸತೊಡಗಿದ್ದರು. ಇಂತಹ ಅರಾಜಕತೆಯನ್ನು ಸರಿಪಡಿಸಬೇಕಾದ ಬಹುದೊಡ್ಡ ಜವಾಬ್ದಾರಿ ಬಿಜ್ಜಳಚಕ್ರವರ್ತಿಯ ಮುಂದೆ ಇತ್ತು.

### i) ವಿಚಿತ್ರ ಲಿಪಿಯ ತಾಮ್ರಶಾಸನ ಓದಿದ್ದು :

ಚಾಲುಕ್ಯ ಸಾಮ್ರಾಜ್ಯದ ಭಂಡಾರವು ಬರಿದಾಗಿತ್ತು. ಚಕ್ರವರ್ತಿಯೇ ವಿಲಾಸದಲ್ಲಿ ಮೈಮರೆತದ್ದರಿಂದ ಸ್ವಾರ್ಥಿ ಅಧಿಕಾರಿಗಳು, ರಾಜಪರಿವಾರದವರು ಭಂಡಾರದ ಸಂಪತ್ತನ್ನು ದುರುಪಯೋಗಪಡಿಸಿಕೊಂಡಿದ್ದರು. ಇಂತಹ ದುರ್ಭರ ಪರಿಸ್ಥಿತಿಯಲ್ಲಿ ಬಿಜ್ಜಳ ಮಹಾರಾಜನು ಬಸವಣ್ಣನವರನ್ನು ಭಂಡಾರದ ಮಂತ್ರಿಯಾಗಿ ನೇಮಿಸಿದನು. ಬಸವಣ್ಣನವರು ಇದನ್ನು ದಕ್ಷತೆಯಿಂದ ನಿರ್ವಹಿಸಲು ನಿರ್ಧರಿಸಿದರು. ಭಂಡಾರದ ಶಾಖೆಯಲ್ಲಿದ್ದ ಅಪ್ರಾಮಾಣಿಕ ಕೋಶಾಧಿಕಾರಿ, ಕರಣಿಕ, ಗಣಕರನ್ನು ಬೇರೆ ವಿಭಾಗಗಳಿಗೆ ಎಚ್ಚರಿಕೆ ನೀಡಿ ವರ್ಗಾಯಿಸಿದರು. ಮಂಗಳವಾಡಿಯಿಂದ ದಕ್ಷ ಕೋಶಾಧಿಕಾರಿ ಸೊಡ್ಡಳ ಬಾಚರಸರನ್ನು ಕರೆಯಿಸಿಕೊಂಡರು. ಹೊಸದಾಗಿ ನೂರಾರು ಜನ ಉತ್ಸಾಹಿ ಯುವ ಗಣಕರನ್ನು ನೇಮಿಸಿಕೊಂಡರು. ಸಾಮ್ರಾಜ್ಯದ ಎಲ್ಲ ಮಂಡಲ–ಪ್ರಾಂತಗಳ ಆದಾಯ ಮತ್ತು ವಿತರಣೆಗಳಿಗಾಗಿ ನೂರಾರು ವಿಭಾಗಗಳಾಗಿ ವಿಭಜಿಸಿ, ಪ್ರತಿಯೊಂದು ವಿಭಾಗಗಳ ಲೆಕ್ಕ–ಪತ್ರಗಳ ವ್ಯವಸ್ಥೆ ಕಲ್ಪಿಸಿದರು.

ಒಂದು ದಿನ ಕಲ್ಯಾಣದ ಗ್ರಂಥಾಲಯ ವಿಭಾಗದ ನೂತನ ಅಧಿಕಾರಿಗಳು ಹಳೆಯ ಹಸ್ತಪ್ರತಿಗಳು, ರಾಜ ಭಂಡಾರದ ಕಡತಗಳನ್ನು, ತಾಳೆಗರಿ ಕಟ್ಟುಗಳನ್ನು ಸ್ವಚ್ಛ ಮಾಡುತ್ತ, ಪರಿಶೀಲನೆ ನಡೆಸಿದ್ದಾಗ ತಾಮ್ರಶಾಸನವೊಂದು ದೊರೆಯಿತು. ಅದನ್ನು ನೋಡಿ, ಸ್ವಚ್ಛಗೊಳಿಸಿದಾಗ ಅದರ ಮೇಲೆ ವಿಚಿತ್ರವಾದ ಲಿಪಿಯಲ್ಲಿ ಬರೆಯಲಾಗಿತ್ತು. ಆ ತಾಮ್ರಪಟವನ್ನು ಮಹಾರಾಜ ಬಿಜ್ಜಳನಿಗೆ ತಲುಪಿಸಿದರು. ಬಿಜ್ಜಳರಾಜನಿಗೂ ಅದು ತಿಳಿಯಲಿಲ್ಲ. ಮರುದಿನ ರಾಜಸಭೆಯಲ್ಲಿ ಆಸ್ಥಾನ ಪಂಡಿತರನ್ನೆಲ್ಲ ಕರೆದು ಓದಿ ಹೇಳಲು ತಿಳಿಸಲಾಯಿತು. ಪ್ರತಿಯೊಬ್ಬರೂ ಆ ತಾಮ್ರಪಟದ ಮೇಲಿನ ಬರಹ ಓದಲು ಪ್ರಯತ್ನಿಸಿ, ಇದಾವುದೋ ವಿಚಿತ್ರ ಲಿಪಿ ಎಂದು ನಿರ್ಧರಿಸಿ ಮರಳಿ ರಾಜನಿಗೆ ನೀಡಿದರು.

ಆಗ ಮಹಾರಾಜ ಬಿಜ್ಜಳನು ತನ್ನ ಮಂತ್ರಿಗಳತ್ತ ನೋಡಿ, ಇದನ್ನು ಓದಿ ಹೇಳುವ ಯಾರಾದರೂ ಪಂಡಿತರು, ಜ್ಞಾನಿಗಳು ನಮ್ಮ ಸಾಮ್ರಾಜ್ಯದಲ್ಲಿ ಇದ್ದಾರೆಯೇ ಎಂಬುದಾಗಿ ಕೇಳಿದನು. ಸಂಗಮದ ಗುರುಕುಲದಲ್ಲಿ ದ್ರಾವಿಡ–ಆರ್ಯ ಭಾಷೆಗಳ ಪಾಂಡಿತ್ಯ–ಜ್ಞಾನಗಳಿಸಿದ್ದ ಬಸವಣ್ಣನವರು ಕುತೂಹಲಿಗಳಾಗಿ ರಾಜಾ ಬಿಜ್ಜಳನಿಂದ ಆ ತಾಮ್ರಪಟವನ್ನು ಪಡೆದು ಸೂಕ್ಷ್ಮವಾಗಿ ಪರಿಶೀಲಿಸಿ, ಅದರಲ್ಲಿ ಅಡಕವಾಗಿದ್ದ ರಹಸ್ಯ ಮಾಹಿತಿಯನ್ನು ಓದಿ ಹೇಳಿದರು– 'ಚಾಲುಕ್ಯ ಸಾಮ್ರಾಟನ ಮಹಾಸಿಂಹಾಸನದ ಕೆಳಗಡೆ–ನೆಲಮನೆಯಲ್ಲಿ ಅಪಾರವಾದ ಚಿನ್ನ–ವಜ್ರ–ವೈಢೂರ್ಯಗಳನ್ನು ತುಂಬಿದ ಒಂಬತ್ತು ಕೊಪ್ಪರಿಗೆಗಳಲ್ಲಿ ಆಪತ್ ಧನವೆಂದು ಕಾಯ್ದಿಡಲಾಗಿದೆ. ರಾಜ್ಯಕ್ಕೆ ದುಷ್ಕಾಲ ಉಂಟಾದಾಗ, ಆರ್ಥಿಕ ವ್ಯವಸ್ಥೆಗೆ ತೊಂದರೆಯಾದಾಗ ಪ್ರಜೆಗಳ ಕಷ್ಟ–ಬವಣೆ ಪರಿಹಾರ ಮಾಡಲು ಅದನ್ನು ಹೊರತೆಗೆದು ಬಳಸಬಹುದಾಗಿದೆ' ಎಂಬ

ವಿಷಯವನ್ನು ಕನ್ನಡ ಅಕ್ಷರಗಳಲ್ಲಿ ತಿರುವು–ಮುರುವಾಗಿ ಬರೆಯಿಸಿಟ್ಟ ಗುಪ್ತ ಸಂದೇಶವಾಗಿತ್ತು. ಬಸವಣ್ಣನವರು ಜಾಣತನದಿಂದ ಅದನ್ನು ಕಂಡು ಹಿಡಿದು ಓದಿದಾಗ, ರಾಜನಿಗೆ ಆಶ್ಚರ್ಯವಾಯಿತು.

ಬಸವಣ್ಣನವರ ಪ್ರತಿಭೆ–ಬುದ್ಧಿಮತ್ತೆಯನ್ನು ಕಂಡು ಕೆಲವು ಅಸೂಯಾಪರ ರಾಜಪುರೋಹಿತರು, ಪಂಡಿತರುಗಳು ' ಸಿಂಹಾಸನವನ್ನು ಅಗಿಸಿ ಸ್ಥಾನಪಲ್ಲಟ ಮಾಡಿದರೆ ಮಹಾರಾಜರಿಗೆ ಹಾಗೂ ಸಾಮ್ರಾಜ್ಯಕ್ಕೆ ಕೇಡುಗಾಲ ಉಂಟಾಗುತ್ತದೆ, ಎಂದು ಮತ್ಸರದಿಂದ ತಾವು ರಾಜನ ಹಿತೈಷಿಗಳೆಂಬಂತೆ ಹೇಳಿದರು. ಮಹಾರಾಜ ಬಿಜ್ಜಳನು 'ಈಗಾಗಲೇ ಸಾಮ್ರಾಜ್ಯದಲ್ಲಿ ಆರ್ಥಿಕ ವಿಪ್ಲವ ಉಂಟಾಗಿದೆ, ಪ್ರಜೆಗಳು ಸಂಕಷ್ಟದಲ್ಲಿದ್ದಾರೆ. ಬೇರೆ ಬೇರೆ ದೇಶಗಳಿಗೆ ಆಹಾರ ಹುಡುಕಿಕೊಂಡು ಗುಳೆ ಹೋಗುತ್ತಿದ್ದಾರೆ. ಇಂತಹ ಸಮಯದಲ್ಲಿ ದೇವರ ಮೇಲೆ ಭಾರಹಾಕಿ, ತಾಮ್ರಪಟದ ಸಂದೇಶವನ್ನು ಪರೀಕ್ಷಿಸುವುದು ಒಳಿತು' ಎಂದು ನಿರ್ಧರಿಸಿದನು.

ಬಿಜ್ಜಳ ಮಹಾರಾಜನು ಭಟರನ್ನು ಕರೆಸಿ ಸಿಂಹಾಸನಕ್ಕೆ ಧಕ್ಕೆಯಾಗದಂತೆ ಸುತ್ತಲಿನ ಸ್ಥಳ ಅಗಿಸಿ, ಸಿಂಹಾಸನವನ್ನು ಸಾವಕಾಶವಾಗಿ ಎತ್ತಿ ಪಕ್ಕಕ್ಕೆ ಇಟ್ಟು, ಹತ್ತು ಅಡಿ ಆಳ ನೆಲ ಅಗಿಸಿದಾಗ ಒಂಬತ್ತು ಕೊಪ್ಪರಿಗೆಗಳ ತುಂಬಾ ಬಂಗಾರ ವಜ್ರ–ವೈಢೂರ್ಯಗಳನ್ನು ತುಂಬಿಸಿಟ್ಟ ಅಪಾರ ಸಂಪತ್ತು ದೊರೆಯಿತು. ಬಿಜ್ಜಳ ಭೂಪಾಲನು ಬಸವಣ್ಣನವರ ವಿದ್ವತ್ತಿಗೆ ತಲೆದೂಗಿದನು. ತನ್ನ ಕಲ್ಯಾಣ ಸಾಮ್ರಾಜ್ಯದ ಅರ್ಥಶಾಖೆಯೊಂದಿಗೆ ಪ್ರಧಾನಮಂತ್ರಿಯಾಗಿ ಮಾಡಿದನು.

### ii) ಕಾಯಕ ಯೋಜನೆಗಳನ್ನು ಜಾರಿಗೆ ತಂದದ್ದು :

ಬಸವಣ್ಣನವರು ಪ್ರಧಾನಮಂತ್ರಿಯಾದ ನಂತರ ಜವಾಬ್ದಾರಿಯು ಹೆಚ್ಚಿತು. ರಾಜ್ಯದ ಪ್ರಜೆಗಳು ನೆಮ್ಮದಿಯಿಂದ ಬದುಕಬೇಕಾದರೆ ಅವರಿಗೆ ಶಿವಪಂಚಾಯತಗಳು ಅವಶ್ಯವಾಗಿ ಬೇಕಾಗುತ್ತವೆ. **ಶಿವಪಂಚಾಯತಗಳೆಂದರೆ** ೧) ಅನ್ನ ೨) ಅರಿವೆ ೩) ಆಶ್ರಯ ೪) ಅರಿವು ೫) ಔಷಧಿ. ಇವು ಪ್ರತಿಯೊಬ್ಬ ಪ್ರಜೆಯ ಮೂಲಭೂತ ಅವಶ್ಯಕತೆಗಳು ಎಂಬುದನ್ನು ಚಿಂತನ ಮಾಡಿದ ಪ್ರಧಾನಿ ಬಸವಣ್ಣನವರು, ಇದಕ್ಕಾಗಿ ಕಾಯಕ ಯೋಜನೆಗಳನ್ನು ರೂಪಿಸಿ, ಸಾಮ್ರಾಜ್ಯದಾದ್ಯಂತ ಜಾರಿಗೆ ತಂದರು. ಪ್ರತಿಯೊಬ್ಬ ಪ್ರಜೆಯು ತನ್ನ ಅವಶ್ಯಕತೆಗಳನ್ನು ತಾನೇ ಕಾಯಕದಿಂದ ಗಳಿಸಿ, ಪೂರೈಸಿಕೊಳ್ಳಬೇಕು. ಅವನ ಕಾಯಕಕ್ಕೆ ಎಲ್ಲ ಸಲಕರಣೆ, ಕಚ್ಚಾ ವಸ್ತುಗಳನ್ನು ಉಪಕರಣಗಳನ್ನು ರಾಜ್ಯದ ಬೊಕ್ಕಸದಿಂದ ಅನುಕೂಲ ಕಲ್ಪಿಸಬೇಕು ಎಂದು ನಿರ್ಧರಿಸಿ **'ಕಾಯಕ ಭಾಗ್ಯ'** ಎಂಬ ಯೋಜನೆ ಜಾರಿಗೆ ತಂದರು.

ರಾಜ್ಯದ ಪ್ರಮುಖ ಕಾಯಕ ಕೃಷಿ, ಈ ಕಾಯಕ ಮಾಡುವ ಒಕ್ಕಲಿಗರಿಗೆ ಕೃಷಿ ಉಪಕರಣಗಳು ದೊರೆಯುವಂತಾಗಬೇಕು. ಅದಕ್ಕೆ ಪೂರಕವಾಗುವ ಕಮ್ಮಾರಿಕೆ,

ಬಡಿಗತನ, ಕಂಬಳಿ ನೇಯ್ಗೆ ಕಾಯಕ, ಚರ್ಮದ ಸಲಕರಣೆಗಳ ನಿರ್ಮಾಣ ಕಾಯಕಗಳು ಪ್ರಜೆಗಳಿಗೆ ಬೇಕಾಗುವ ವಸ್ತುಗಳಿಗಾಗಿ ನೇಕಾರಿಕೆ, ಬಣಗಾರಿಕೆ, ಕುಂಬಾರಿಕೆ, ನುಲಿ ಹೊಸೆಯುವ ಕಾಯಕ, ಮಡಿವಾಳ ಕಾಯಕ, ಕ್ಷೌರಿಕ ಕಾಯಕ, ಎಚ್ಚರಿಕೆ ಕಾಯಕ, ಸ್ಮಶಾನ ಕಾಯಕ, ಧಾರ್ಮಿಕ ಸಂಸ್ಕಾರದ ಕಾಯಕ, ಮಕ್ಕಳ ಹಾಗೂ ಹಿರಿಯ ಪ್ರಜೆಗಳಿಗಾಗಿ ಪ್ರತಿ ಗ್ರಾಮಗಳಲ್ಲಿ ಶಿಕ್ಷಣ ಕೇಂದ್ರಗಳು– ಸಾಲಿಮಠ ಕಾಯಕ, ಓದಿಸುವ ಮಠಗಳು, ವಿದ್ಯಾರ್ಥಿಗಳಿಗಾಗಿ ಪ್ರಸಾದ ನಿಲಯಗಳು, ವಸತಿ ಕೇಂದ್ರಗಳು, ಚರ್ಮೋದ್ಯೋಗಗಳಿಗಾಗಿ ಸತ್ತ ದನಗಳಿಂದ ಚರ್ಮಬೇರ್ಪಡಿಸುವ ಕಾಯಕ, ಚರ್ಮ ಹದಗೊಳಿಸುವ ಕಾಯಕ, ಚಮ್ಮಾವುಗೆ ಮಾಡುವ ಕಾಯಕ, ದೋಣಿ ನಡೆಸುವ ಕಾಯಕ, ಹೂಮಾಲೆ ಕಾಯಕ, ಪತ್ರಿಕಾಯಕ, ಬುಟ್ಟಿ ಹೆಣೆಯುವ ಕಾಯಕ, ವೈದ್ಯ ಕಾಯಕ, ಔಷಧಿ ಕೇಂದ್ರಗಳು, ದವಸಧಾನ್ಯ ಕುಟ್ಟುವ ಕಾಯಕ, ದೋಸೆ ತಯಾರಿಸುವ ಕಾಯಕ, ಓಲೆಗರಿಗಳ ಸಂಗ್ರಹಿಸುವ ಕಾಯಕ, ಗ್ರಂಥಾಲಯ, ವಾಚನಾಲಯ ಕಾಯಕ, ಗ್ರಾಮ ನ್ಯಾಯ– ನಿರ್ಣಯ ಪಂಚರು, ಪ್ರತಿ ಊರಿನಲ್ಲಿ ಆಟದ ಮೈದಾನಗಳು, ಗರಡಿಮನೆಗಳು ಒಂದೇ.......ಎರಡೇ ಅನಂತ ಕಾಯಕಗಳ ಯೋಜನೆ, ಅವುಗಳಿಗಾಗಿ ತರಬೇತಿ ಕೇಂದ್ರಗಳು, ತರಬೇತಿ ನೀಡುವ ಕೇಂದ್ರಗಳು, ಅನುಭವಿಕ ತರಬೇತಿದಾರರ ನೇಮಿಸುವಿಕೆ ಮುಂತಾದವುಗಳನ್ನು ಜಾರಿಗೆ ತಂದರು. ಇವುಗಳಿಗಾಗಿ ರಾಜ್ಯ ಭಂಡಾರದ ಸಂಪತ್ತನ್ನು ಸರಿಯಾಗಿ ಒದಗಿಸಿಕೊಟ್ಟರು.

ಈ ಎಲ್ಲ ಯೋಜನೆಗಳು ಜಾರಿಗೆ ಬಂದುದರಿಂದ ನಿರುದ್ಯೋಗ ಸಮಸ್ಯೆ ನಿವಾರಣೆಯಾಗಿ, ರಾಜ್ಯಾದ್ಯಂತ ಪ್ರಜೆಗಳು ಒಂದಿಲ್ಲೊಂದು ಕಾಯಕಗಳಲ್ಲಿ ನಿರತರಾದರು, ಸ್ವಾವಲಂಬಿಗಳಾಗತೊಡಗಿದರು. ಜನಪದರು ಹೃದಯತುಂಬಿ ಹಾಡು, ಲಾವಣಿ ಕಟ್ಟಿ ಹಾಡತೊಡಗಿದರು. ಜನಪದ ಕಲೆ–ಸಂಗೀತಗಳು ಬೆಳೆದವು.

ಕಾಯಕವ ಕಲಿಸುದುಕ ನಾಯಕನು ಬಸವಯ್ಯ
ಜೀಯ ಹೊಸಮತಕೆ ಶಿವಭಕ್ತಿ । ಸಾರುದಕೆ
ರಾಯ ಜೀವನದ ಹೊಸನುಡಿಗೆ ॥

ಉಂಡು ತೇಗಿತು ಲೋಕ ಕೊಂಡಾಡಿ ಕಾಯಕವ
ಕಂಡ ಕಂಡಲ್ಲಿ ದಾಸೋಹ । ಕಾಯಕದ
ಕಂಡ ಜೀವನದ ಶಿವ ಮಾತು ॥

ಬಸವ ರಾಜ್ಯದ ಸಿರಿಯು ಬಸವ ಬಡವರ ನಿಧಿಯು
ಬಸವ ಮಳೆ ಬೆಳೆಯು ನಾಡೊಳಗೆ । ನಿಜದೀಪ
ಬಸವನೆ ಸಗ್ಗ ಸೋಪಾನ ॥

ಜೀಯ ಬಸವನೆ ಶರಣು ಕಾಯಕವು ಶರಣರಿಗೆ
ತಾಯಿ ಬೇರಂತೆ ಶಿವಮತಕೆ । ಜಗದೊಳಗೆ
ಕಾಯಕವೆ ಕಾಣೋ ಕೈಲಾಸ ॥

ಬಸವಣ್ಣ ನಿನ್ಹೆಸರು ದೆಸೆದೆಸೆಗೆ ಶಿವಮಂತ್ರ
ಹೊಸಮತಕೆ ಮಂತ್ರ ನಿತ್ಯದಲ್ಲಿ । ಒಕ್ಕಲಿಗ
ಹೊಸ ಮಂತ್ರ ಬಸವ ಜಪಿಸುವನು ॥

ಈ ರೀತಿಯಾಗಿ ಬಸವಣ್ಣನವರು ಅಭಿವೃದ್ಧಿ ಪಡಿಸಿದ ಗ್ರಾಮೀಣ ಉದ್ಯೋಗಗಳು, ಹೊಸದಾಗಿ ರೂಪಿಸಿದ ಗೃಹ ಕೈಗಾರಿಕೆಗಳು, ವಿವಿಧ ಕಾಯಕಗಳಿಂದಾಗಿ ಕಲ್ಯಾಣ ರಾಜ್ಯದಲ್ಲಿಯೇ ಅದ್ಭುತವಾದ ಬದಲಾವಣೆ ಕಾಣತೊಡಗಿತು. ಬಸವಣ್ಣನವರು ಪ್ರಧಾನಮಂತ್ರಿಯಾಗಿ ಮಾಡಿದ ಕಾರ್ಯಗಳಿಂದಾಗಿ ಚಾಲುಕ್ಯ ಸಾಮ್ರಾಜ್ಯದಲ್ಲಿ ಹೊಸ ಸಂಚಲನ ಪ್ರಾರಂಭವಾಯ್ತು. 'ಕೂಡಲಸಂಗನ ರಾಜ್ಯವ ಹಂಚಿಕೊಳ್ಳಿ ನಿಮನಿಮಗೆಲ್ಲ' ಎಂದು ಪ್ರತಿಯೊಂದು ಗ್ರಾಮಗಳಲ್ಲಿ ಸಾಮೂಹಿಕ ಕೃಷಿ, ಸಾಮೂಹಿಕ ದಾಸೋಹ ವ್ಯವಸ್ಥೆ ಅನುಷ್ಠಾನಕ್ಕೆ ತಂದು ಸಹಕಾರ ಜೀವನದ ಅಡಿಪಾಯ ಹಾಕಿದರು.

## iii) ಕಲ್ಯಾಣ ರಾಜ್ಯ–ಸುಖೀರಾಜ್ಯ :

ಬಸವಣ್ಣನವರ ಕ್ರಿಯಾಯೋಜನೆಗಳಿಂದಾಗಿ ಕಲ್ಯಾಣ ರಾಜ್ಯದಲ್ಲಿ ಪ್ರಜೆಗಳು ಸಮತೆ–ಸ್ವಾತಂತ್ರ್ಯ–ಬಂಧುತ್ವ–ಮಾನವೀಯತೆಗಳಿಂದ ಬದುಕತೊಡಗಿದರು. 'ಕಾಯಕ'ದಿಂದಾಗಿ ಸ್ವಾವಲಂಬನೆ, ಸ್ವಾವಲಂಬನೆಯಿಂದ ಸ್ವಾಭಿಮಾನ, ಸ್ವಾಭಿಮಾನದಿಂದ ಸಮೃದ್ಧಿ, ಸಮೃದ್ಧಿಯಿಂದ ನೆಮ್ಮದಿ, ಸಂತೃಪ್ತಿ ಎಲ್ಲರ ಬಾಳಿನಲ್ಲಿ ಒಡಮೂಡತೊಡಗಿತು.

'ಭಕ್ತಿ ವಿಶೇಷವ ಮಾಡು**ವಡೆ** ಹತ್ತು ಬೆರಳುಗಳುಂಟು
ಹಾಸಿ ದುಡಿದರೆ **ತನಗುಂಟು** ತನ್ನ ಪ್ರಮಥರಿಗುಂಟು'

ಎಂಬಂತಹ ಸುಖೀ ರಾಜ್ಯ– ನಿಜ ಅರ್ಥದಲ್ಲಿ ಮಾನವ ಕಲ್ಯಾಣದ ರಾಜ್ಯವಾಗಿ ಪರಿವರ್ತನೆಯಾಗತೊಡಗಿತು.

'ಕಲ್ಯಾಣದಲ್ಲಿ ನೀಡುವವರುಂಟು, ಬೇಡುವವರಿಲ್ಲ' ಅಂದರೆ ಕಾಯಕ ಜೀವಿಗಳುಂಟು, ಭಿಕ್ಷುಕರಿಲ್ಲದ (ಸೋಮಾರಿಗಳಿಲ್ಲದ) ಸುಭಿಕ್ಷದೇಶವಾಯಿತು ಕಲ್ಯಾಣ ಸಾಮ್ರಾಜ್ಯ.

ಬಸವಣ್ಣನವರು ಕಲ್ಯಾಣ ರಾಜಧಾನಿಗೆ ಬಂದು, ಪ್ರಧಾನಮಂತ್ರಿಯಾಗಿ ಒಂಬತ್ತು ವರ್ಷಗಳಲ್ಲಿ ಇಡೀ ದಕ್ಷಿಣ ಭಾರತದಲ್ಲಿ ಮನೆ-ಮಾತಾದರು. ಬಿಜ್ಜಳರಾಜನೂ ಕೂಡ ಬಸವಣ್ಣನವರ ಈ ಮಹಾಕಾರ್ಯಗಳಿಗೆ ಸಹಕಾರ ನೀಡುತ್ತಾ ಬಂದುದರಿಂದ, ಆತನ ಕೀರ್ತಿಯೂ ಕೂಡ ಹೊರ ರಾಜ್ಯಗಳಿಗೂ ಹಬ್ಬತೊಡಗಿತು.

ನಾಡಿನ ಎಲ್ಲೆಡೆಯಿಂದ ಅಂದರೆ ಎಲ್ಲ ಪ್ರಾಂತ-ಮಂಡಲಗಳಿಂದ ಬಸವಣ್ಣನವರ ಹತ್ತಿರ ವಿಚಾರ-ವಿನಿಮಯಗಳಿಗೆ, ಅನುಭವಗಳ ಚಿಂತನ-ಮಂಥನಗಳಿಗೆ ಶರಣ ಜೀವಿಗಳು ಬರತೊಡಗಿದರು ದೂರದಿಂದ ಬಂದವರಿಗೆಲ್ಲ ವಸತಿ ವ್ಯವಸ್ಥೆ, ಪ್ರಸಾದ ವ್ಯವಸ್ಥೆ ಸಾಗಿತು. ಬಸವಣ್ಣನವರ ಮನೆ 'ಮಹಾಮನೆ' ಯಾಗಿ 'ಬಸವ ಮಹಾಮನೆ' ಯಾಗಿ ಮಾರ್ಪಟ್ಟಿತು. ಅಕ್ಕನಾಗಮ್ಮ, ಗಂಗಾಂಬಿಕೆ, ನೀಲಾಂಬಿಕೆಯರು, ವಿದ್ಯಾರ್ಜನೆ ಮುಗಿಸಿ ಕಪ್ಪಡಿಸಂಗಮದಿಂದ ಯುವಕ ಚೆನ್ನಬಸವಣ್ಣನೂ ಆಗಮಿಸಿದ್ದರಿಂದ ಎಲ್ಲರಿಗೂ ಅವಿಶ್ರಾಂತವಾಗಿ ಕೆಲಸ-ಕಾರ್ಯ, ಆದರೋಪಚಾರ ಜವಾಬ್ದಾರಿ ಹೆಚ್ಚಿತು. ಬಸವಣ್ಣನವರ ಮನದಲ್ಲಿ 'ಅನುಭವ ಮಂಟಪ' ಎಂಬ ವಿನೂತನ ಸಂಸ್ಥೆ ನಿರ್ಮಾಣದ ಯೋಜನೆ ಮೂಡತೊಡಗಿತು.

## ೬. ಅನುಭವಮಂಟಪ ಸ್ಥಾಪನೆ (ಕ್ರಿ.ಶ.೧೧೪೦)

### ಅ) ಧಾರ್ಮಿಕ ಕ್ರಾಂತಿ :

ಬಸವಣ್ಣನವರು ಕಲ್ಯಾಣಕ್ಕೆ ಬಂದು ಈಗಾಗಲೇ ಒಂಬತ್ತು ವರ್ಷಗಳು ಸಂದಿದ್ದವು. ಪ್ರಧಾನ ಮಂತ್ರಿಯಾಗಿ ರಾಜ್ಯದ ಆಡಳಿತದಲ್ಲಿ ಬದಲಾವಣೆ, ಪ್ರಜೆಗಳಲ್ಲಿ ಆತ್ಮ ವಿಶ್ವಾಸ, ಸ್ವಾವಲಂಬನೆ, ನೆಮ್ಮದಿ ತುಂಬುತ್ತಲೇ, ಇತ್ತ ಪ್ರತಿದಿನ ಸಂಜೆ ತಮ್ಮ ಮಹಾಮನೆಯಲ್ಲಿ ಕಾಯಕಜೀವಿ ಶರಣ-ಶರಣೆಯರ ಅನುಭಾವಗೋಷ್ಠಿ ನಡೆಸುತ್ತಿದ್ದರು. ಶರಣರ ಸಂಖ್ಯೆ ಹೆಚ್ಚಾದಂತೆ ಒಂದು ಸ್ವತಂತ್ರವಾದ, ವಿಶಾಲವಾದ ಸ್ಥಳದಲ್ಲಿ ಅನುಭಾವ ನಡೆಸುವ ಅವಶ್ಯಕತೆ ಉಂಟಾಯಿತು. ತ್ರಿಪುರಾಂತಕ ಕೆರೆಯ ಆಚೆಯ ದಡದಲ್ಲಿರುವ ವಿಶಾಲವಾದ ಗುಡ್ಡದ ಸ್ಥಳವನ್ನು ಆಯ್ಕೆ ಮಾಡಿದರು. ಅಲ್ಲಿ ಶರಣ-ಶರಣೆಯರ ಸಾಧನೆಗಾಗಿ ಗುಹೆಗಳೂ ಇದ್ದವು. ವಿಶಾಲವಾದ ಮಂಟಪದ ನಿರ್ಮಾಣವಾಯಿತು. ಶರಣ-ಶರಣೆಯರ ಅನುಭವ ಚಿಂತನ-ಮಂಥನ ನಡೆಸುವ ಈ ಸಂಸ್ಥೆಗೆ '**ಅನುಭವ ಮಂಟಪ**' ಎಂದು ಹೆಸರು ನಿರ್ಧಾರ ಮಾಡಲಾಯಿತು. ಶರಣೆ ನೀಲಾಂಬಿಕೆಯವರು ಈ ಕುರಿತು ತಮ್ಮ ವಚನದಲ್ಲಿ ದಾಖಲಿಸಿರುವುದನ್ನು ಕಾಣುತ್ತೇವೆ.

ಪ್ರಣವದ ಬೀಜದ ಬಿತ್ತಿ
ಪಂಚಾಕ್ಷರಿಯ ಬೆಳೆಯ ಬೆಳೆದು
ಪರಮಪ್ರಸಾದವನೊಂದು ರೂಪಮಾಡಿ ಮೆರೆದು
ಭಕ್ತಿ ಫಲವನುಂಡಾತ ನಮ್ಮ ಬಸವಯ್ಯನು.
ಚೆನ್ನಬಸವನೆಂಬ ಪ್ರಸಾದಿಯ ಪಡೆದು
ಅನುಭವ ಮಂಟಪವನನು ಮಾಡಿ
ಅನುಭವ ಮೂರ್ತಿಯಾದ ನಮ್ಮ ಬಸವಯ್ಯನು
ಅರಿವ ಸಂಪಾದಿಸಿ ಆಚಾರವನಂಗಗೊಳಿಸಿ
ಏಳುನೂರೆಪ್ಪತ್ತು ಅಮರಗಣಂಗಳ
ಅನುಭವ ಮೂರ್ತಿಗಳ ಮಾಡಿದಾತ ನಮ್ಮ
ಬಸವಯ್ಯನು.........ಸಂಗಯ್ಯನಲ್ಲಿ
ಸ್ವಯಲಿಂಗಿಯಾದ ನಮ್ಮ ಬಸವಯ್ಯನು.

ಬಸವಣ್ಣನವರು ಅನುಭವ ಮಂಟಪ ಸ್ಥಾಪಿಸಿದ ನಂತರ, ದೇಶ-ವಿದೇಶಗಳವರೆಗೆ ಅನುಭವ ಮಂಟಪದ ಕೀರ್ತಿವಾರ್ತೆಯು ಚರಜಂಗಮರ (ಧರ್ಮ ಪ್ರಸಾರಕರ) ಮೂಲಕ ಹಬ್ಬತೊಡಗಿತು. ಸಮಸ್ತ ಜಂಬೂದ್ವೀಪ ಅಂದರೆ ಭಾರತದ ಉದ್ದಗಲಕ್ಕೂ ಬಸವಣ್ಣನವರ ಕ್ರಾಂತಿಕಾರಕ ವಿಚಾರಗಳು, ತತ್ವಗಳು ಪ್ರಸಾರಗೊಳ್ಳತೊಡಗಿದ್ದರಿಂದ ಆಧ್ಯಾತ್ಮಜೀವಿಗಳು, ಯೋಗ ಸಾಧಕರು, ತತ್ವ ಜಿಜ್ಞಾಸುಗಳು,ಸಾತ್ವಿಕ ಭಕ್ತರು ಅನುಭವ ಮಂಟಪಕ್ಕೆ (ಕಲ್ಯಾಣಕ್ಕೆ) ಆಗಮಿಸ ತೊಡಗಿದರು.

**'ಅನುಭವ ಮಂಟಪ'**ವು ಜಗತ್ತಿನ ಪ್ರಪ್ರಥಮ, ಪ್ರಜಾಪ್ರಭುತ್ವ ಮಾದರಿಯ ಸ್ವತಂತ್ರ-ಮುಕ್ತ ಚಿಂತನೆಯ ಸಂಸತ್ತು (ಪಾರ್ಲಿಮೆಂಟ್) ಎಂದೇ ಖ್ಯಾತಿ ಪಡೆಯಿತು. ಕ್ರಿ. ಶ. ೧೧೪೦ ರಲ್ಲಿ ಬಸವಣ್ಣನವರಿಂದ ಸ್ಥಾಪಿಸಲ್ಪಟ್ಟ ಅನುಭವ ಮಂಟಪದಲ್ಲಿ ಅಖಂಡ ೨೭ ವರುಷಗಳ ಕಾಲ ಅಂದರೆ ೧೧೬೭ ವರೆಗೆ (ಕಲ್ಯಾಣ ಕ್ರಾಂತಿ ಜರಗುವವರೆಗೆ) ನಿರಂತರವಾಗಿ ೭೭೦ ಜನ ಸದಸ್ಯರಿಂದ (ಶರಣ-ಶರಣೆಯರಿಂದ) ಚಿಂತನ ಚರ್ಚೆ ನಡೆಯಿತು.

## i) ಅನುಭವ ಮಂಟಪದಲ್ಲಿದ್ದ ಶರಣ ಸಂಕುಳ :

ವಿಶ್ವಗುರು ಬಸವಣ್ಣನವರು ೧೧೩೧ ರಲ್ಲಿ ಮಂಗಳವಾಡಿಯಿಂದ ಕಲ್ಯಾಣಕ್ಕೆ ಬರುವಾಗ ಅವರೊಂದಿಗೆ ಮಂಗಳವಾಡಿಯಲ್ಲಿ ಅನುಭಾವಗೋಷ್ಠಿಯಲ್ಲಿ ಭಾಗವಹಿಸುತ್ತಿದ್ದ ಶರಣ- ಶರಣೆಯರಲ್ಲದೆ ಅನೇಕ ಭಕ್ತರೂ ಕೂಡ ಆಗಮಿಸಿ,

ಕಲ್ಯಾಣದಲ್ಲಿ ನೆಲೆಸಿದರು. ೧೧೩೧ ರಿಂದ ೧೧೪೦ ವರೆಗೆ ಒಂಭತ್ತು ವರ್ಷಗಳ ಕಾಲ ನಾಡಿನೆಲ್ಲೆಡೆಯಿಂದ ಆಗಮಿಸತೊಡಗಿದ್ದರು. ಅನುಭವ ಮಂಟಪ ಪ್ರಾರಂಭವಾದ ನಂತರವೂ ಆಗಮಿಸಿದರು. ೧೧೪೦ ರಿಂದ ೧೧೬೭ ವರೆಗೆ ಅನುಭಾವ ನಡೆಸಿದರು. ಚೆನ್ನಬಸವಣ್ಣನವರು ಅನುಭವ ಮಂಟಪದ ಸಂಚಾಲಕರಾಗಿ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸಿದರು. ಅನುಭವ ಮಂಟಪದ ಚರ್ಚೆಗಳಿಗೆ ಹಿರಿಯ ಶರಣರು ನೇತೃತ್ವ ವಹಿಸುತ್ತಿದ್ದರು. ನಮಗೆ ಸಧ್ಯ ಲಭ್ಯವಾಗಿರುವ ಶರಣ-ಶರಣೆಯರ ಹೆಸರುಗಳು ಹೀಗಿವೆ.

**ಪ್ರಮುಖ ಶರಣರಾದ** ' ಜೇಡರ ದಾಸಿಮಯ್ಯ, ಮಾದಾರ ಚನ್ನಯ್ಯ, ಸಮಗಾರ ಹರಳಯ್ಯ, ಡೋಹರ ಕಕ್ಕಯ್ಯ, ಹೊಲೆಯರ ಶಿವನಾಗಮಯ್ಯ, ರೇವಣಸಿದ್ಧೇಶ್ವರ, ಮರುಳಸಿದ್ಧೇಶ್ವರ, ಏಕೋರಾಮ, ಮಲ್ಲಿಕಾರ್ಜುನ ಪಂಡಿತಾರಾಧ್ಯ, ಮಾದಾರ ಧೂಳಯ್ಯ, ಮೇದರ ಕೇತಯ್ಯ, ಮೋಳಿಗೆ ಮಾರಯ್ಯ, ಕುಂಬಾರ ಗುಂಡಯ್ಯ, ಹೂಗಾರ ಮಾದಣ್ಣ, ಶಂಕರ ದಾಸಿಮಯ್ಯ, ಸಕಳೇಶ ಮಾದರಸ, ನುಲಿಚಂದಯ್ಯ, ಹಡಪದ ಅಪ್ಪಣ್ಣ, ಚಂದಿಮರಸ, ಅಲ್ಲಮಪ್ರಭು, ಸಿದ್ಧರಾಮೇಶ್ವರ, ಅಂಬಿಗ ಚೌಡಯ್ಯ, ಅಜಗಣ್ಣ, ಅಗ್ಘವಣಿ ಹಂಪಯ್ಯ, ಅಮುಗಿ ದೇವಯ್ಯ, ಆದಯ್ಯ, ಆಯ್ದಕ್ಕಿ ಮಾರಯ್ಯ, ಅರಿವಿನ ಮಾರಿತಂದೆ, ಉಗ್ಘಡಿಸುವ ಗಬ್ಬಿದೇವಯ್ಯ, ಉರಿಲಿಂಗದೇವ, ಉರಿಲಿಂಗಪೆದ್ದಿ, ಎಚ್ಚರಿಕೆ ಕಾಯಕದ ಮುಕ್ತಿನಾಥಯ್ಯ, ಎಲಿಗಾರ ಕಾಮಣ್ಣ, ಒಕ್ಕಲಿಗ ಮುದ್ದಣ್ಣ, ಕಿನ್ನರಿ ಬ್ರಹ್ಮಯ್ಯ, ಕೋಲಶಾಂತಯ್ಯ, ಗಜೇಶ ಮಸಣಯ್ಯ, ಗಾಣದ ಕನ್ನಪ್ಪ, ಗೋರಕ್ಷ, ಘಟ್ಟಿವಾಳಯ್ಯ ಡಕ್ಕೆಯ ಮಾರಯ್ಯ, ತಳವಾರ ಕಾಮಿದೇವಯ್ಯ, ತುರುಗಾಹಿ ರಾಮಣ್ಣ, ದಸರಯ್ಯ, ನಗೆಮಾರಿ ತಂದೆ, ಪಂಡಿತಾರಾಧ್ಯ, ಬಹಿರೂಪಿ ಚೌಡಯ್ಯ, ಬಾಚಿಕಾಯಕದ ಬಸವಪ್ಪ, ಬಾಲಸಂಗಯ್ಯ, ಬಿಬ್ಬಿ ಬಾಚಯ್ಯ, ಮಡಿವಾಳ ಮಾಚಿದೇವ, ಮಧುವಯ್ಯ, ಮರುಳ ಶಂಕರದೇವ, ರಾಯಸದ ಮಂಚಣ್ಣ, ಲದ್ದೆಯ ಸೋಮಣ್ಣ, ಕುರುಬ ಗೊಲ್ಲಾಳ, ಸೊಡ್ಡಳ ಬಾಚರಸ, ಹಾವಿನಾಳ ಕಲ್ಲಯ್ಯ, ಹೆಂಡದ ಮಾರಯ್ಯ, ವಚನಭಂಡಾರಿ ಶಾಂತರಸ ಮುಂತಾದವರು.

**ಪ್ರಮುಖ ಶರಣೆಯರಾದ**-ಅಕ್ಕನಾಗಮ್ಮ, ಗಂಗಾಂಬಿಕೆ, ನೀಲಾಂಬಿಕೆ, ಅಕ್ಕಮಹಾದೇವಿ, ಅಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ಕಾಳವ್ವೆ, ಮಸಣಮ್ಮ, ರೇಮ್ಮವ್ವೆ, ರೇವಮ್ಮ, ರೇಚವ್ವೆ, ಕಾಮಮ್ಮ, ಲಕ್ಷ್ಮಮ್ಮ, ಸೋಮವ್ವೆ, ಕೇತಲದೇವಿ, ಗಂಗಮ್ಮ, ಗೊಗ್ಗವ್ವೆ, ವೀರಮ್ಮ, ದುಗ್ಗಳೆ, ಗುಡ್ಡವ್ವೆ, ಬಾಚಿಕಾಯಕದ ಕಾಳವ್ವೆ, ಮುಕ್ತಾಯಕ್ಕ, ಬೊಂತಾದೇವಿ, ಮೋಳಿಗೆ ಮಹಾದೇವಮ್ಮ, ರಾಯಸದ ರಾಯಮ್ಮ, ಸತ್ಯಕ್ಕ, ಸಂಕವ್ವೆ, ಲಿಂಗಮ್ಮ, ದಾನಮ್ಮ, ಸಾತವ್ವೆ, ಗಂಗಾದೇವಿ, ಕಲ್ಯಾಣಮ್ಮ ಮುಂತಾದವರು.

ಒಟ್ಟು ೭೭೦ ಜನ ಅಮರಗಣಂಗಳೆನಿಸಿದ ಶರಣ ಸಂಕುಳ ಅನುಭವ ಮಂಟಪದಲ್ಲಿದ್ದರು ಎಂಬ ಉಲ್ಲೇಖಗಳು ದೊರೆಯುತ್ತವೆ.

ಈ ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಸಂವಾದ, ಚರ್ಚೆಗಳಿಗೆ ಒಬ್ಬ ಹಿರಿಯ ಶರಣರು ಅಧ್ಯಕ್ಷತೆ ವಹಿಸುತ್ತಿದ್ದರು. ಅದನ್ನು ಶೂನ್ಯ ಪೀಠಾಧ್ಯಕ್ಷತೆ ಶೂನ್ಯ ಸಿಂಹಾಸನಾಧ್ಯಕ್ಷತೆ (ಬಸವಣ್ಣನವರು ೧೨ ವರುಷ ಶೂನ್ಯ ಪೀಠ ರಚಿಸಿ ಅಧ್ಯಕ್ಷತೆಗಾಗಿ ದಾರಿ ಕಾಯ್ದರೆಂದು ಕಾವ್ಯಗಳು, ಶೂನ್ಯಸಂಪಾದನೆ ಗ್ರಂಥಗಳಲ್ಲಿ ಹೇಳಲಾಗಿದೆ) ವಹಿಸಿದವರಲ್ಲಿ ಅಲ್ಲಮಪ್ರಭುದೇವರು, ಚೆನ್ನಬಸವಣ್ಣನವರು, ಸಿದ್ಧರಾಮೇಶ್ವರರು ಎಂದು ಉಲ್ಲೇಖವಿದೆ.

ಸಕಲಜೀವಾತ್ಮರ ಲೇಸು, ಮಾನವ ಕುಲದ ಕಲ್ಯಾಣಕ್ಕಾಗಿ ಧಾರ್ಮಿಕ, ಸಾಮಾಜಿಕ, ರಾಜಕೀಯ, ಆಧ್ಯಾತ್ಮಿಕ ವಿಚಾರಗಳ ಕುರಿತು, ಸಮಸ್ಯೆಗಳ ಕುರಿತು, ಸ್ವಾನುಭಾವದ ವಚನಗಳ ಮೂಲಕ ಚರ್ಚಿಸಿ, ಸ್ಪಷ್ಟ ನಿರ್ಧಾರವನ್ನು ಪ್ರಕಟಿಸುತ್ತಿದ್ದರು, ಅಭಿವ್ಯಕ್ತಗೊಳಿಸುತ್ತಿದ್ದರು.

## ii) ಲಿಂಗಾಯತ ಧರ್ಮದ ಉದಯ :

ದೇವರು–ಧರ್ಮ–ಧರ್ಮಾಚರಣೆಗಳು ಪ್ರತಿಯೊಬ್ಬ ಮಾನವರಿಗೂ ಸರಳವಾಗಿರಬೇಕು, ಶೋಷಣೆಯಿಂದ ಮುಕ್ತವಾಗಿರಬೇಕು, ಸರ್ವರಿಗೂ ಸಮಾನ ಅವಕಾಶ ನೀಡುವಂತಿರಬೇಕು, ಸ್ವಾತಂತ್ರ್ಯವಿರಬೇಕು, ಸಂಸ್ಕಾರವು ಎಲ್ಲರಿಗೂ ದೊರೆಯುವಂತಾಗಬೇಕು. ಅಲ್ಲಿ ವಿಪ್ರ ಮೊದಲು– ಅಂತ್ಯಜಕಡೆಯಾಗಿ ಆ ಬಾಲ–ವೃದ್ಧರಿಗೂ, ಸ್ತ್ರೀ–ಪುರುಷರೆಲ್ಲರಿಗೂ ಒಂದೇ ರೀತಿಯ ಸಮಾನತೆಯ ದೀಕ್ಷಾದಿ ಸಂಸ್ಕಾರಗಳಿರಬೇಕೆಂಬ ಹಂಬಲವನ್ನು ಬಾಲ್ಯದಿಂದಲೂ ಹೊಂದಿದ್ದ ಬಸವಣ್ಣನವರು, ಕಾರ್ಯರೂಪಕ್ಕೆ ತಂದರು, ಕಪ್ಪಡಿ ಸಂಗಮದ ಗುರುಕುಲ ವಿದ್ಯಾರ್ಜನೆಯ ನಂತರ, ಇಷ್ಟಲಿಂಗವೆಂಬ ವಿನೂತನ ದೇವತತ್ವ ಸಂಶೋಧಿಸಿದ್ದರು, ಅದರ ಸಾಧನೆಗೈದಿದ್ದರು. ಇಷ್ಟಲಿಂಗ ಸಂಸ್ಕಾರವನ್ನು ಅಕ್ಕನಾಗಮ್ಮ, ಚೆನ್ನಬಸವಣ್ಣ, ಗಂಗಾಂಬಿಕೆ, ನೀಲಾಂಬಿಕೆಯರಿಗೆ ಕರುಣಿಸಿದ್ದರು. ಜ್ಯೋತಿ ಮುಟ್ಟಿದ ಬತ್ತಿಗಳೆಲ್ಲ ಜ್ಯೋತಿಗಳಾಗುವಂತೆ ಗುರುಮುಟ್ಟಿ ಗುರುವಾದ ಶರಣ–ಶರಣೆಯರೆಲ್ಲ ಅನಂತರಿಗೆ ಇಷ್ಟಲಿಂಗ ಸಂಸ್ಕಾರ ನೀಡುತ್ತಿದ್ದರು.

ಧರ್ಮಗುರು ಬಸವಣ್ಣನವರಿಂದ ಉದಯವಾದ ಇಷ್ಟಲಿಂಗಧಾರಿಗಳ ಈ ಹೊಸಧರ್ಮವೂ **'ಲಿಂಗಾಯತ ಧರ್ಮ'**ವೆಂಬ ಹೆಸರಿನಲ್ಲಿ ಅನುಭವ ಮಂಟಪದ ೭೭೦ ಅಮರಗಣಂಗಳಿಂದ ಪ್ರಸಿದ್ಧಿಗೆ ಬಂದಿತು. ಬಸವಣ್ಣನವರ ಮಾರ್ಗದರ್ಶನ–ದಲ್ಲಿ ಚೆನ್ನಬಸವಣ್ಣನವರು ಈ ಧರ್ಮಕ್ಕೆ ತಾತ್ವಿಕ–ಸೈದ್ಧಾಂತಿಕ–ದಾರ್ಶನಿಕ ತತ್ವಗಳ ಚೌಕಟ್ಟನ್ನು ಒದಗಿಸಿದರು. ಇಷ್ಟಲಿಂಗ ಸಂಸ್ಕಾರವನ್ನು ಹೊಂದಿದ ಪ್ರತಿಯೊಬ್ಬ ಭಕ್ತನು ಸಮತೆ–ಸ್ವಾತಂತ್ರ್ಯ–ಬಂಧುತ್ವ–ಮಾನವೀಯತೆಯ ತಳಹದಿಯ ಮೇಲೆ

ಜೀವನ ಸಾಗಿಸಬೇಕು ಎಂಬ ಉದ್ದೇಶದಿಂದ ಧರ್ಮತತ್ವಗಳನ್ನು ಬಸವಣ್ಣನವರು ಕರುಣಿಸಿದ್ದನ್ನು, ಚೆನ್ನಬಸವಣ್ಣನವರು ಸುಜ್ಞಾನದಿಂದ ವ್ಯವಸ್ಥೆಗೊಳಿಸಿದರು.

**iii) ಲಿಂಗಾಯತ ಧರ್ಮದ ಮೂಲ ತತ್ವಗಳು :**

ಅ) ಅಷ್ಟಾವರಣಗಳು : ಗುರು,ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ

ಆ) ಪಂಚಾಚಾರಗಳು : ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ.

ಇ) ಷಟ್ ಸ್ಥಲಗಳು : ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ.

ಈ) ಯೋಗ : ಲಿಂಗಾಂಗಯೋಗ (ಬಸವಯೋಗ)

ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೆ ಪ್ರಾಣವಾಗಿ, ಷಟಸ್ಥಲವೆ ಆತ್ಮವಾಗಿ ಧರ್ಮಾಚರಣೆ ಮಾಡುವ ಸದ್ಭಕ್ತನೇ ಲಿಂಗಾಯತನು.

ಪ್ರತಿಯೊಬ್ಬ ಭಕ್ತನ ಅಷ್ಟತನುವಿನೊಳಗೆ ಹುದುಗಿರ್ಪ ಎಂಟು ನಿರಾಕಾರ ತತ್ವಗಳು ಅಂತರಂಗ ಜ್ಞಾನ–ಅಷ್ಟಾವರಣಗಳೆನಿಸಿ, ಅವೇ ಸಾಕಾರಗೊಂಡು ಭಕ್ತನ ಕ್ರಿಯೆಯಲ್ಲಿ ಪ್ರಕಟಗೊಳ್ಳುವುದರಿಂದ ಅವು ಕ್ರಿಯಾ–ಅಷ್ಟಾವರಣ (ಬಹಿರಂಗಷ್ಟಾವರಣ) ವೆನಿಸುತ್ತವೆ.

| ಅಷ್ಟತನುಗಳು | ಜ್ಞಾನ ಅಷ್ಟಾವರಣ | ಕ್ರಿಯಾ ಅಷ್ಟಾವರಣ |
|---|---|---|
| ಸ್ಥೂಲ | ಚಿದ್ ಅರಿವು | ಗುರು |
| ಸೂಕ್ಷ್ಮ | ಚಿಲ್ಲಿಂಗ | ಲಿಂಗ |
| ಕಾರಣ | ಚಿದ್‌ಭಾವ | ಜಂಗಮ |
| ನಿರ್ಮಲ | ಚಿದ್ರಸ | ಪಾದೋದಕ |
| ಆನಂದ | ಚಿತ್‌ಪ್ರಸಾದ | ಪ್ರಸಾದ |
| ಶುದ್ಧ | ಚಿದ್‌ವಿಭೂತಿ | ವಿಭೂತಿ |
| ಚಿದ್ರೂಪ | ಚಿದ್‌ರುದ್ರಾಕ್ಷಿ | ರುದ್ರಾಕ್ಷಿ |
| ಚಿನ್ಮಯ | ಚಿನ್ಮಂತ್ರ | ಮಂತ್ರ |

ಸದ್ಭಕ್ತನ ಆಚರಣೆ ದೃಷ್ಟಿಯಿಂದ ಪಂಚಾರಗಳು –ಇಷ್ಟಲಿಂಗದ ಉಪಾಸನೆ ಲಿಂಗಾಚಾರ, ಸತ್ಯಶುದ್ಧಕಾಯಕ–ದಾಸೋಹ ಸದಾಚಾರ; ಲಿಂಗಾಯತರಲ್ಲಿ ಜಾತಿ–ಕುಲ–ವರ್ಗ–ವರ್ಣ–ಆಶ್ರಮಭೇದ ನಿರಸನವಾಗಿಪ್ಪದು ಶಿವಾಚಾರ; ವೃಷ್ಟಿ–

ಸಮಷ್ಟಿಯಲ್ಲಿರುವ ಅನ್ಯಾಯದ ವಿರುದ್ಧ ಪ್ರತಿಭಟಿಸುವುದೇ ಗಣಾಚಾರ; ಸುದುವಿನಯದಿಂದ. ಕಿಂಕರಭಾವದಿಂದ ಸಮಾಜ ಸೇವೆಗೈವುದು ಭೃತ್ಯಾಚಾರ, ಈ ರೀತಿಯ ಆಚರಣೆಯೇ ಲಿಂಗಾಯತ ಧರ್ಮಾಚಾರವಾಗಿದೆ.

ಸದ್ಭಕ್ತನು ಅಂತರಂಗದ ವಿಕಾಸಕ್ಕಾಗಿ ಇಷ್ಟಲಿಂಗ ಪೂಜೆ ಮಾಡಿಕೊಳ್ಳುತ್ತಾ ಶ್ರದ್ಧೆ-ನಿಷ್ಠೆ-ಅವಧಾನ-ಅನುಭಾವ-ಆನಂದ-ಸಮರಸ ಭಕ್ತಿಯಲ್ಲಿ ತನ್ಮಯನಾಗಿಪ್ಪ ಪರಮಾನಂದ ಅವಸ್ಥೆಯೇ ಷಟ್‌ಸ್ಥಲವಾಗಿದೆ. ಭಕ್ತನೇ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳ, ಸಾಧನೆ ಸಾಧಿಸಿ, ಲಿಂಗಾಂಗಯೋಗಿ (ಬಸವಯೋಗಿ) ಯಾಗುತ್ತಾನೆ.

### iv) ಜನವಾಣಿ ಕನ್ನಡವನ್ನೇ ದೇವವಾಣಿಯಾಗಿಸಿದ್ದು :

ಬಸವಪೂರ್ವಯುಗದಲ್ಲಿ ಸಂಸ್ಕೃತವು ದೇವವಾಣಿ ಎನಿಸಿಕೊಂಡಿತ್ತು. ಆ ಭಾಷೆಯನ್ನು ಉಚ್ಚವರ್ಣಿಯರು ಕೇವಲ ತಮ್ಮ ಪಾಂಡಿತ್ಯ ಪ್ರದರ್ಶನಕ್ಕೆ ದೇವತಾ ವಿಗ್ರಹಗಳ ಆರಾಧನೆಗೆ, ಹೋಮ-ಹವನಾದಿ ಕ್ರಿಯೆಗಳಿಗೆ ವಾದ-ಚರ್ಚೆಗಳಿಗೆ ಬಳಸಿಕೊಳ್ಳುತ್ತಿದ್ದರು. ಭಾರತದ ಗ್ರಾಮೀಣ ಪ್ರಜೆಗಳಿಗೆ ವಿದ್ಯೆಯಿಂದ ವಂಚಿತರಾಗಿಸಿದ್ದರಿಂದ ಅವರು ಅನಕ್ಷರಸ್ತರಾಗಿ, ಅಜ್ಞಾನದಲ್ಲಿಯೇ ಉಳಿದಿದ್ದರು. ಈ ಭಾಷೆಯನ್ನು ಪುರೋಹಿತ-ಪಂಡಿತರುಗಳು ತಮ್ಮ ಸ್ವಾರ್ಥಸಾಧನೆಗೆ ದುರುಪಯೋಗ ಮಾಡಿಕೊಂಡಿದ್ದರು. ಅಲ್ಲಲ್ಲಿ ಕೆಲವು ಕವಿಗಳು ಸಂಸ್ಕೃತ ಭೂಯಿಷ್ಟ ಚಂಪೂ ಕಾವ್ಯಗಳಲ್ಲಿ ಕನ್ನಡದ ಬಳಕೆ ಮಾಡಿಕೊಂಡಿದ್ದು, ಅದೂ ಕೂಡ ಆಸ್ಥಾನದ ರಾಜ-ಮಹಾರಾಜರನ್ನು ಓಲೈಸುವ ಭಾಷೆಯಾಗಿ, ದೇವತೆಗಳನ್ನು ಓಲೈಸುವ ಮಂತ್ರಗಳ ಸ್ತುತಿರೂಪದಲ್ಲಿದ್ದುದರಿಂದ, ಅದು ಸಾಮಾನ್ಯ ಜನರಿಂದ ಬಹುದೂರದಲ್ಲಿಯೆ ಉಳಿದಿತ್ತು.

ಬಸವಣ್ಣನವರು ಅಂದಿನ ಬಹುಸಂಖ್ಯಾತ ಜನರ ಆಡುನುಡಿಯಾದ ಕನ್ನಡದಲ್ಲಿಯೇ ಅನುಭವ ಮಂಟಪದ ವಿಚಾರಗಳನ್ನು ವಚನರೂಪದಲ್ಲಿ ಬರೆದು ಎಲ್ಲರಿಗೂ ತಲುಪುವಂತೆ ಮಾಡಿದರು. ಹೊರ ರಾಜ್ಯಗಳಿಂದ ಬಂದ ಶರಣರೂ ಕೂಡ ಕನ್ನಡ ಕಲಿತು, ಕನ್ನಡದಲ್ಲಿಯೇ ವಚನರಚನೆ ಮಾಡಿದ್ದನ್ನು ಕಾಣುತ್ತೇವೆ. ಜನರ ಆಡು ನುಡಿ ಕನ್ನಡವು ಶಿವಾನುಭವದ ಮಾಧ್ಯಮವಾಗಿ, ಕನ್ನಡವು ದೇವವಾಣಿಯಾಯಿತು. ಎಲ್ಲೆಡೆ ಜನಪದರು ಕನ್ನಡದಲ್ಲಿ ಹಾಡು, ಪದ, ಲಾವಣಿ ರಚಿಸಿ ಹಾಡತೊಡಗಿದರು.

### v) ಗ್ರಂಥ ಪ್ರಮಾಣ ನಿರಸನಗೈದು ಅನುಭವ ಪ್ರಮಾಣಕ್ಕೆ ಮಹತ್ವ :

ಅಂದಿನ ಕಾಲದಲ್ಲಿ ಪಂಡಿತೋತ್ತಮರು ಯಾವುದೇ ವಿಷಯ ಕುರಿತು ವಾದ ಮಂಡಿಸಲು ವೇದ, ಶಾಸ್ತ್ರ, ಆಗಮ, ಪುರಾಣಾದಿಗಳ ಪ್ರಮಾಣ

ತೋರಿಸುತ್ತಿದ್ದರು. ಬಸವಾದಿ ಶರಣರ ಹೊಸ ಸಿದ್ಧಾಂತಗಳಿಗೆ ಪಂಡಿತರುಗಳು 'ಪ್ರಮಾಣ' ಕೇಳಿದಾಗ ಬಸವಣ್ಣನವರು ಹೇಳುತ್ತಾರೆ 'ದೇವಲೋಕ-ಮರ್ತ್ಯಲೋಕ ಬೇರಿಲ್ಲ ಕಾಣಿರೋ, ಸತ್ಯ ನುಡಿವುದೇ ದೇವಲೋಕ, ಮಿಥ್ಯ ನುಡಿವುದೇ ಮರ್ತ್ಯ ಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ,' ಎಂದು ಸ್ಥಾನವಾಚಕವಾಗಿ ಕಲ್ಪಿಸಿಕೊಂಡಿದ್ದ ವಿಚಾರಗಳನ್ನು ಮೌಲ್ಯವಾಚಕವಾಗಿ ಜೀವನದ ಆಚರಣೆಗಳಲ್ಲಿ ತೋರಿಸಿಕೊಟ್ಟು ಇದಕ್ಕೆ 'ನಮ್ಮ ಕೂಡಲಸಂಗಮದೇವರೇ ಪ್ರಮಾಣ' ಎಂದರೆ ಅನುಭವವೇ ಪ್ರಮಾಣವೆಂದು ಸಾರಿದರು. ಅಲ್ಲಮಪ್ರಭುದೇವರು-

'ವೇದ ಪ್ರಮಾಣವಲ್ಲ, ಶಾಸ್ತ್ರ ಪ್ರಮಾಣವಲ್ಲ
ಆಗಮ ಪ್ರಮಾಣವಲ್ಲ, ಪುರಾಣ ಪ್ರಮಾಣವಲ್ಲ
ಕಾಣಿಭೋ ನಮ್ಮ ಲಿಂಗಕ್ಕೆ'

ಎಂದು ಸ್ಪಷ್ಟವಾಗಿ ಗ್ರಂಥ ಪ್ರಮಾಣವನ್ನು ನಿರಾಕರಿಸಿ, ಅನುಭವ ಪ್ರಮಾಣವನ್ನು ಒಪ್ಪಕೊಳ್ಳುತ್ತಾರೆ, ಸಮಾನತೆಯ ಬದುಕಿಗೆ ವಾಸ್ತವಿಕತೆಯ ಅನುಭವಗಳು ಆಧಾರವಾಗಬೇಕೆ ಹೊರತು ಯಾವುದೋ ಕಾಲದಲ್ಲಿ ಬರೆದಿಟ್ಟ, ಜಾತಿ-ವ್ಯವಸ್ಥೆಯ, ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯತೆ, ಸ್ವರ್ಗ-ನರಕಗಳ ಪ್ರತಿಪಾದಿಸುವ ಗ್ರಂಥಗಳು ಅಲ್ಲಾ ಎಂದು ಹೇಳುತ್ತಾರೆ. ಪ್ರಾಚೀನ ಗ್ರಂಥಗಳಲ್ಲಿ ಒಳ್ಳೆಯ ವಿಚಾರಗಳು ಇದ್ದರೆ, ಅವುಗಳನ್ನು ಸ್ವೀಕರಿಸಬೇಕು ನಿಜ, ಆದರೆ ಮಾನವ-ಮಾನವರನ್ನು, ಒಡೆದು-ಆಳುವ, ವರ್ಣಭೇದ ವಿಚಾರಗಳನ್ನು ತಿರಸ್ಕರಿಸಬೇಕೆಂಬುದು ಶರಣರ ವಿಚಾರಧಾರೆಯಾಗಿತ್ತು.

### vi) ಧರ್ಮದ ಮೂಲ ದಯೆ :

ಬಸವಪೂರ್ವಯುಗದ ಧಾರ್ಮಿಕ ವ್ಯವಸ್ಥೆಯಲ್ಲಿ 'ಬಲಿಃ ಧರ್ಮಸ್ಯ-ಮೂಲ' ಎಂಬಂತಾಗಿ ಧರ್ಮ-ದೇವರ ಹೆಸರಿನಲ್ಲಿ ಕಣ್ಣಿಗೆ ಕಾಣದ ದೇವತೆಗಳ ಪ್ರೀತ್ಯಾರ್ಥವಾಗಿ, ಕಣ್ಣಿಗೆ ಕಾಣುವ ಪ್ರಾಣಿಗಳನ್ನು ಯಜ್ಞ-ಯಾಗಗಳಲ್ಲಿ ಬಲಿಕೊಡುವ ಕರ್ಮಠ ವ್ಯವಸ್ಥೆ ರೂಢಿಸಿಕೊಂಡು ಬರಲಾಗಿತ್ತು. ಇದಕ್ಕಾಗಿ ವೇದಮಂತ್ರಗಳ ದುರ್ಬಳಕೆ ಮಾಡಿಕೊಂಡು ಸಾಧು ಸ್ವಭಾವದ, ಮುಗ್ಧ ಪ್ರಾಣಿಗಳ ಬಲಿಕೊಟ್ಟು, ಯಜ್ಞಕುಂಡದಲ್ಲಿ ಪೂರ್ಣಾಹುತಿಕೊಟ್ಟು ಅದರ ಬೇಯಿಸಿದ ಮಾಂಸವನ್ನು ದೇವತೆಗಳ ಪ್ರಸಾದವೆಂದು ಭುಂಜಿಸಿ ಸೋಮರಸ (ಸೆರೆ) ಕುಡಿದು ಇದುವೇ ಧರ್ಮಾಚರಣೆ ಯೆಂದು ಬಿಂಬಿಸಿದ್ದರು.

ಬಸವಣ್ಣನವರು ಇಂತಹ ಹಿಂಸಾತ್ಮಕ ಕರ್ಮಠ ಧರ್ಮಾಚರಣೆಗಳನ್ನು ಖಂಡಿಸಿದರು.

ದಯವಿಲ್ಲದ ಧರ್ಮವದೇವುದಯ್ಯಾ ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯಾ ?
ಕೂಡಲಸಂಗಯ್ಯ ನಂತಲ್ಲದೊಲ್ಲನಯ್ಯಾ

ಎಂದು ನಿಷ್ಠುರವಾಗಿ ನುಡಿದುದಲ್ಲದೇ 'ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೆ ಅಳು ಕಂಡಾ ! ವೇದವನೋದಿದವರ ಮುಂದೆ ಅಳು ಕಂಡಾ ! ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ ! ನೀನತ್ತುದುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ' ಎಂದು ಆ ಮೂಕ ಪ್ರಾಣಿಗಳ ನೋವಿಗೆ ಸ್ಪಂದಿಸುತ್ತಾರೆ. ಭಂಡತನದಲ್ಲಿ ತಮ್ಮ ಧಾರ್ಮಿಕ ಗ್ರಂಥಗಳಲ್ಲಿ ಹೇಳಿದೆ, ನಾವು ಆಚರಿಸುವವರೇ ಎಂಬ ಕರ್ಮಠ ಪುರೋಹಿತರ ಧಾರ್ಷ್ಟ್ಯಕ್ಕೆ 'ಹೋಮದ ನೆವದಲ್ಲಿ ಹೋತನ ಕೊಂದು ತಿಂಬ ಅನಾಮಿಕರೊಡನೆ ಆಡಿ ಗೆಲುವುದೇನು ?' ಎಂದು, ಅಂಥವರಿಂದ ಮುಗ್ಧ ಜನರನ್ನು ಜಾಗೃತಗೊಳಿಸಿ, ದೂರವಾಗಿರಲು ತಿಳಿವಳಿಕೆ ನೀಡುತ್ತಾರೆ.

### vii) ಏಕದೇವೋಪಾಸನೆ–ಇಷ್ಟಲಿಂಗತತ್ವ ಪ್ರತಿಪಾದನೆ :

ಅರಿವಿಲ್ಲದ ಮುಗ್ಧಜನರಿಗೆ ನೂರೆಂಟು ಕಾಲ್ಪನಿಕ ಕಥೆಗಳನ್ನು ಕಟ್ಟಿ ನಂಬಿಸಿ, ಭಯ ಹೊಗಿಸಿ ಒಂದಲ್ಲ, ಎರಡಲ್ಲ, ಮೂವತ್ಮೂರು ಕೋಟಿ ದೇವಾನು–ದೇವತೆಗಳನ್ನು ಸೃಷ್ಟಿಸಿದ್ದರು. ಸ್ವರ್ಗ ಲೋಕಕ್ಕೆ ೧೧ ಕೋಟಿ, ಮರ್ತ್ಯಲೋಕಕ್ಕೆ ೧೧ ಕೋಟಿ, ಪಾತಾಳ ಲೋಕಕ್ಕೆ ೧೧ ಕೋಟಿ ಎಂದು ಹೇಳುತ್ತಾ, ವರ್ಣಗಳಿಗೆ, ಜಾತಿ–ವಿಜಾತಿಗಳಿಗೆ, ಭಿನ್ನ–ಭಿನ್ನ ದೇವತೆಗಳ, ದೇವತಾ ವಿಗ್ರಹಗಳ ಕಲ್ಪನೆ ಬಿತ್ತಿದ್ದರು. ಆ ದೇವಾನು– ದೇವತೆಗಳೂ ಕೂಡ ಪರಸ್ಪರ ಹೆಣ್ಣು–ಹೊನ್ನು–ಮಣ್ಣಿಗಾಗಿ, ಅಧಿಕಾರಕ್ಕಾಗಿ ಬಡಿದಾಡುತ್ತಿರುವಂತೆ, ಯುದ್ಧ ಮಾಡಿ ಸೋಲುವದು, ಗೆಲುವುದು, ಕೊಲ್ಲುವುದು, ಮುಂತಾದ ಕಟ್ಟು ಕತೆ–ಪುರಾಣಗಳನ್ನು ರಚಿಸಿದ್ದರು. ಜನರಲ್ಲಿ ಭಯದ ಭಕ್ತಿ, ಮೂಢನಂಬಿಕೆ, ಮನೆ ಮಾಡುವಂತೆ ಮಾಡಿದ್ದರು.

ಪುರೋಹಿತಶಾಹಿ ಕರ್ಮಠರ ಇಂತಹ ಸ್ವಾರ್ಥ ಶೋಷಣೆಯಿಂದ ಜನರನ್ನು ಮುಕ್ತಗೊಳಿಸಲು ಯೋಚಿಸಿದ ಬಸವಣ್ಣನವರು, ಈ ಜಗತ್ತಿನಲ್ಲಿ ಒಂದೇ 'ದೇವ ತತ್ವ' ಇರುತ್ತದೆಂದು ಸಾರಿದರು.

ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ
ಹಣಿಗೆ ದೈವ, ಬಿಲ್ಲ ನಾರಿ ದೈವ ಕಾಣಿರೋ !
ಕೊಳಗ ದೈವ, ಗಿಣ್ಣಿಲು ದೈವ ಕಾಣಿರೋ!
ದೈವ ದೈವವೆಂದು ಕಾಲಿಡಲು ಇಂಬಿಲ್ಲ
ದೇವನೊಬ್ಬನೇ, ಕೂಡಲಸಂಗಮದೇವ.

ಎಂದು ಕೋಟ್ಯಾಂತರ ದೈವಗಳ ಕಾಲ್ಪನಿಕ ಬಹುದೇವೋಪಾಸನೆಯನ್ನು ನಿರಸನಗೈದರು. ಭಯಾನಕವಾದ ಭಿನ್ನ ಭಿನ್ನ ಆಕಾರಗಳಲ್ಲಿ ಮಾನವ ನಿರ್ಮಿತ ಜಡ ಮೂರ್ತಿಗಳನ್ನು ನಿರ್ಮಿಸಿ, ಅವುಗಳಿಗೆ ಆಲಯ ಕಟ್ಟಿಸಿ, ಅವು ಹಸುಗೂಸು, ಬಾಣಂತಿಯರ, ಕುರಿ, ಕೋಳಿ, ಕೋಣಗಳ, ಬಲಿ ಕೇಳುತ್ತವೆಯೆಂದು, ಮೈಯಲ್ಲಿ ದೇವರು ಬಂದಂತೆ ನಟನೆ ಮಾಡುತ್ತಾ, ಜನರನ್ನು ವಂಚಿಸುತ್ತಿದ್ದ ಮಹಾದುರಂತದಿಂದ ಶೂದ್ರಾತಿ-ಶೂದ್ರರನ್ನು. ಮುಗ್ಧ ಸ್ತ್ರೀಯರನ್ನು ಪಾರು ಮಾಡಲು ಬಸವಣ್ಣನವರು ಬುದ್ಧಿ ಹೇಳುತ್ತಾರೆ, ತಿಳಿವಳಿಕೆ ನೀಡುತ್ತಾರೆ.

ಆಗಳೂ ಲೋಗರ ಮನೆಯ ಬಾಗಿಲ  
ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು  
ಹೋಗೆಂದಡೆ ಹೋಗವು ಕೆಲವು ದೈವಂಗಳು  
ನಾಯಿಗಿಂತ ಕರಕಷ್ಟ ಕೆಲವು ದೈವಂಗಳು  
ಲೋಗರ ಬೇಡಿಕೊಂಡುಂಬ ದೈವಂಗಳು  
ತಾವೇನ ಕೊಡುವವು ಕೂಡಲಸಂಗಮದೇವಾ ?

ಎಂದು ಹೇಳಿ, ಅರಗುತಿಂದು ಕರಗುವ ದೈವವ, ಉರಿಯ ಕಂಡರೆ ಮುರುಟುವ ದೈವವ, ಅವಸರ ಬಂದರೆ ಮಾರುವ ದೈವವ, ಅಂಜಿಕೆಯಾದರೆ ಹೂಳುವ ದೈವಗಳನ್ನು ಎಂತು ಸರಿ ಎನ್ನಬಹುದು ? ನೀರ ಕಂಡಲ್ಲಿ ಮುಳುಗುವ, ಮರನ ಕಂಡಲ್ಲಿ ಸುತ್ತುವ ಮೂಢ ಜನರಿಗೆ ಬತ್ತುವ ಜಲ, ಒಣಗುವ ಮರಗಳನ್ನು ದೇವರೆನ್ನಲು ಬಹುದೆ ? ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲ್ಲಿ ಕಿಚ್ಚೆದ್ದು ಮನೆಯನ್ನು ಸುಡುವಾಗ ಬಚ್ಚಲ ನೀರು, ಬೀದಿಯ ಧೂಳುಮಣ್ಣು ಹೊಯ್ದು ಬೊಬ್ಬಿಟ್ಟು ಕರೆಯುವಿರಿ, ಇವೆಲ್ಲ ದೇವರೆನ್ನಬಹುದೆ?

ಇನ್ನು ಕೆಲವು ಪಂಡಿತರು 'ಇಬ್ಬರು (ಶಿವ ಹಾಗೂ ಪಾರ್ವತಿ) ದೇವರೆಂದೋ; ಮೂವರು (ಬ್ರಹ್ಮ-ವಿಷ್ಣು-ಮಹೇಶ್ವರ) ದೇವರೆಂದೋ ಉಬ್ಬುಬ್ಬಿ ಮಾತನಾಡುವರು. ದೇವರು ಒಬ್ಬನೇ ಇದ್ದಾನೆ, ಇಬ್ಬರೆಂಬುದು ಹುಸಿ ನೋಡಾ ಎಂದು ಅವರಿಗೂ ಅವರು ನಂಬಿರುವ ವೇದದ ಶ್ಲೋಕಗಳನ್ನು ತೋರಿಸಿಯೇ ತಿಳಿವಳಿಕೆ ಮಾಡಿಕೊಡುತ್ತಾರೆ. ಬಹುದೇವೋಪಾಸನೆ, ತೀರ್ಥ ಕ್ಷೇತ್ರಗಳೆಂದು ಪರ್ಯಟನ, ಯಾತ್ರೆ ಮಾಡುವವರಿಗೆ ಆಯುಷ್ಯ, ಹಣ, ಆರೋಗ್ಯ ಹಾಳು ಮಾಡಿಕೊಳ್ಳದೇ ಗುರು ಕರುಣಿಸಿದ ಇಷ್ಟಲಿಂಗದಲ್ಲಿಯೇ ಸರ್ವ ತೀರ್ಥ ಕ್ಷೇತ್ರಗಳು ಇಪ್ಪವೆಂದು ಇಲ್ಲಿಯೇ ಅರ್ಚನೆ-ಅರ್ಪಣ-ಅನುಭಾವ ಮಾಡುತ್ತಾ ಅರಿವಿನ ಶರಣ ಜೀವನ ಬದುಕಲು ತಿಳಿಸುತ್ತಾರೆ.

**viii) ಭಕ್ತನ ದೇಹವೇ ದೇವಾಲಯ ಭಕ್ತ ದೇವತ್ವ :**

ವಿಶ್ವಗುರು ಬಸವಣ್ಣನವರು ಜಡದೇವಾಲಯಗಳ ಸಂಸ್ಕೃತಿಯನ್ನು ಅವುಗಳ

ಮೂಲಕ ನಡೆಯುತ್ತಿದ್ದ ದೇವದಾಸಿ, ಬಸವಿ ಪದ್ಧತಿಗಳನ್ನು ತೊಡೆದು ಹಾಕಲು, ಅರ್ಚನೆ-ಪೂಜನೆ-ಹರಕೆಗಳ ನೆಪದಲ್ಲಿ ನಡೆಯುತ್ತಿದ್ದ ಶೋಷಣೆ ತಪ್ಪಿಸಲು ಗಂಭೀರವಾಗಿ ಯೋಚನೆ-ಚಿಂತನೆ ನಡೆಸಿ, 'ಜಡ ದೇವಾಲಯ' ವ್ಯವಸ್ಥೆಗೆ ಪರ್ಯಾಯವಾಗಿ 'ಚೈತನ್ಯ ದೇಹಾಲಯ'ತತ್ವ-ಸಿದ್ಧಾಂತ ಪ್ರತಿಪಾದಿಸಿದರು.

ಉಳ್ಳವರು ಶಿವಾಲಯವ ಮಾಡುವರಯ್ಯ
ನಾನೇನ ಮಾಡಲಿ ಬಡವನಯ್ಯ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರವೇ ಹೊನ್ನ ಕಳಸವಯ್ಯಾ
ಕೂಡಲಸಂಗಮದೇವ ಕೇಳಯ್ಯ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

ಎಂಬ 'ಚೈತನ್ಯದೇವ' ಅಂದರೆ ಭಕ್ತ, ಭಕ್ತನ ದೇಹವೇ ದೇವಾಲಯ, ದೇಹ ದೇವಾಲಯದಲ್ಲಿ ಚಿಲ್ಲಿಂಗ ಚೈತನ್ಯವಿದೆ. ಅದರ ಕುರುಹಾದ ವಿಶ್ವದಾಕಾರದ ಇಷ್ಟಲಿಂಗವನ್ನು ಪೂಜೆ ಮಾಡಿಕೊಳ್ಳಲು ತಿಳಿಸಿ ಹೇಳಿದರು.

ಈ ಇಷ್ಟಲಿಂಗ ಪೂಜೆಯ ಮೂಲಕ, ಮಧ್ಯಸ್ಥಗಾರರ ಹಾವಳಿ ತಪ್ಪಿಸಿದರು. ತಾನುಂಬ ಊಟವನು ತನ್ನ ರತಿಸುಖವನು ತಾನೇ ಮಾಡಬೇಕಲ್ಲದೆ, ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ? ಎಂದು ಬುದ್ಧಿ ಹೇಳಿ, ತನ್ನ ತಾನರಿದರೆ ತಾನೇ ದೇವ ನೋಡಾ ಎಂದು ಸ್ಪಷ್ಟಪಡಿಸಿದರು.

### ix) ಮೂಢನಂಬಿಕೆ ಕಂದಾಚಾರಗಳ ನಿರಸನ :

ಜನ ಮಾನಸದಲ್ಲಿ ಭಯ-ಭೀತಿಗಳನ್ನು ಬಿತ್ತಿ ಅವರು ಅಜ್ಞಾನದಿಂದ, ಮೂಢತನದಿಂದ ಹಲವಾರು ಪ್ರಕಾರಗಳ ವ್ರತ-ನೇಮ, ಅರ್ಚನೆ-ಪೂಜನೆ, ಅಭಿಷೇಕಗಳನ್ನು ಮಾಡಲು ಪ್ರೇರೆಪಿಸಿದ್ದ ಪುರೋಹಿತ-ಪೂಜಾರಿಗಳು, ಜನರನ್ನು ಕಂದಾಚಾರ, ಶುಷ್ಕಾಚಾರ, ಮೂಢಾಚಾರಗಳ ದಾಸರಾಗುವಂತೆ ಮಾಡಿದ್ದರು. ಇದೆಲ್ಲದಕ್ಕೂ ಜನರಲ್ಲಿರುವ ಅಜ್ಞಾನ, ಮೌಢ್ಯವೆಂಬುದನ್ನು ಅರಿತು ಬಸವಾದಿ ಶರಣರು, ಜನರಿಗೆ ವಿದ್ಯೆಕೊಡುವುದರ ಜೊತೆಗೆ ಸುವಿದ್ಯೆ, ಸುವಿಚಾರ, ಸುಜ್ಞಾನ ನೀಡಿ, ಜಾಗೃತಗೊಳಿಸಿದರು.

ನೋಡಿ ನೋಡಿ ಮಾಡುವ ನೇಮ ಸಲ್ಲವು ಸಲ್ಲವು
ತನುವುದ್ದೇಶ, ಮನವುದ್ದೇಶವಾಗಿ ಮಾಡುವ ನೇಮ ಸಲ್ಲವು, ಸಲ್ಲವು
ಗುರುಪಥವ ಮೀರಿ ಮಾಡುವ ನೇಮ ಸಲ್ಲವು, ಸಲ್ಲವು
ಕೂಡಲಸಂಗಮದೇವಾ
ಇವು ನಿಮ್ಮ ನಿಜದೊಳಗೆ ನಿಲ್ಲವು ನಿಲ್ಲವು.

ಎಂದು ಉಪದೇಶಿಸುತ್ತಾ ಹಾಲನೇಮ, ಹಾಲ ಕೆನೆಯ ನೇಮ, ಬೆಣ್ಣೆಯ ನೇಮ, ತುಪ್ಪದ ನೇಮ, ಮುಂತಾದವುಗಳ ಬಗ್ಗೆ ತಿಳಿಸಿ ಹೇಳಿ, ಆಪ್ಯಾಯನ ಪ್ರಸಾದ ಕೆಡಿಸಬಾರದು ಎಂಬ ತಿಳಿವಳಿಕೆ ನೀಡಿದರು.

ಸಗಣಿಯ ಬೆನಕಂಗೆ ಸಂಪಿಗೆ ಹೂಗಳಿಂದ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದೆಂದು, ಮಣ್ಣ ಮೂರ್ತಿಗಳಿಗೆ ಜಲದಲ್ಲಿ ಅಭಿಷೇಕ ಮಾಡಿ ತೊಳೆದರೆ ಕೆಸರಹುದಲ್ಲದೆ ಆದರ ಅಚ್ಚಿಗ (ಮೂಲ ಗುಣ) ಬಿಡದೆಂದು ವೈಜ್ಞಾನಿಕವಾಗಿ ಬಿಂಬಿಸಿದರು. 'ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ, ಕಡಲೆ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ, ಅಗ್ಘವಣಿಯ ನೇಮವ ಹಿಡಿದಾತ, ಕಪ್ಪೆಯಾಗಿ ಹುಟ್ಟುವ, ಪುಷ್ಪದ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವನೆಂದು ವಿಡಂಬನೆಗೈದರು ಶರಣರು.

ಭಕ್ತರು ವ್ರತಗಳನ್ನು ಮಾಡುವುದೇ ಆದರೆ–'ಪರಧನ ಮುಟ್ಟಲಾರೆ, ಪರಸ್ತ್ರೀಗೆ ಆಳುಪಲಾರೆ, ಪರದೈವಂಗಳಿಗೆ ಎರಗಲಾರೆ' ಎಂಬ ನೇಮ–ವ್ರತ ಹಿಡಿಯಲು ತಿಳಿಸಿದರು. ಅಂಗದ ಮೇಲೆ ಇಷ್ಟಲಿಂಗ ಧರಿಸಿ, ನೂರೆಂಟು ದೈವಗಳ ವ್ರತ–ನೇಮ ಆಚರಣೆ ಮಾಡುವವರು ಲಿಂಗಭಕ್ತರಲ್ಲಾ, ಅವರು ಅಳಿಮನದವರು. ಇಂಥವರದು ವ್ಯಭಿಚಾರದ ಭಕ್ತಿ ಎಂದು ಕಟುವಾಗಿ ಹೇಳುತ್ತಾರೆ. ಲಿಂಗವಂತರು ಯಾವಾಗಲೂ 'ಶರಣರ ಸಂಗ' ದಲ್ಲಿರಬೇಕೆಂದು ತಿಳಿಸುತ್ತಾರೆ. ಅಂದರೆ ಮಾತ್ರ ಮೂಢನಂಬಿಕೆ ಕಂದಾಚಾರಳಿಂದ ಬಿಡುಗಡೆಯಾಗಲು ಸಾಧ್ಯವೆನ್ನುತ್ತಾರೆ.

### x) ಮರ್ತ್ಯಲೋಕವು ಕರ್ತಾರನ ಕಮ್ಮಟ :

'ಬ್ರಹ್ಮೇವ ಸತ್ಯ, ಜಗನ್ಮಿಥ್ಯಾ' ಎಂಬ ಹುಸಿ ವೇದಾಂತವನ್ನು ಶರಣರು ತಿರಸ್ಕರಿಸಿದರು. ಜಗತ್ತು ಸುಳ್ಳು ಎಂದು ನಂಬಿದರೆ, ಜನರ ಬದುಕಿಗೆ ಅರ್ಥವೇ ಉಳಿಯುವುದಿಲ್ಲ. 'ಸಂಸಾರವು ನೀರಮೇಲಣ ಗುಳ್ಳೆ, ಇದು ನಿಜವಲ್ಲ' ಎಂಬ ಮಾಯಾವಾದದ ಬೆನ್ನುಹತ್ತಿದರೆ ಸಂಸಾರ ಮಾಡುವುದಾದರೂ ಏಕೆ ? ಇಂತಹ ಮಿಥ್ಯಾವಾದಿಗಳಿಗೆ ಕೂಳು ಹಾಕುವುದಾದರೂ ಏಕೆ ? ಇಂತಹ ಸುಳ್ಳಿನ ನುಡಿಗಳನ್ನು ಕೇಳಿದ ಜನ ನಿರಾಶಾವಾದಿಗಳಾಗಿ ಬಿಟ್ಟರೆ, ಬದುಕಿಗೆ ಅರ್ಥವಾದರೂ ಏನು ? ಬಸವಣ್ಣನವರು ಈ 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ' ವೆಂದು ಸಾರಿದರು. 'ದೇವ' ಎಂಬ ಪರಮಚೇತನವು (ಪರಶಿವ, ಪರಬ್ರಹ್ಮ, ಪರವಸ್ತು) ಸತ್ಯ ಎಂದುದಾದರೆ, ಅಂತಹ ದೇವರಿಂದ ಹೊರಹೊಮ್ಮಿದ ಈ ಅನಂತ ವಿಶ್ವ, ಮರ್ತ್ಯಲೋಕ, ಮರ್ತ್ಯಲೋಕದೊಳಗಣ ಜೀವಿಗಳು, ಬದುಕು–ಬಾಳುವೆ ಎಲ್ಲವೂ ಸತ್ಯ ಎಂಬ ಜೀವನ ಸಿದ್ಧಾಂತವನ್ನು ಪ್ರತಿಪಾದಿಸಿದರು. ಮಾನವಜೀವಿಗಳಲ್ಲಿ ಉತ್ಸಾಹ ತುಂಬಿದರು. ನಿರಾಶಾವಾದದಿಂದ ಹೊರಬರುವಂತೆ ಮಾಡಿ ಸಾರ್ಥಕ ಜೀವನ ಬಾಳುವಂತೆ ಮಾಡಿದರು.

### xi) ಕರ್ಮಸಿದ್ಧಾಂತ ನಿರಸನ :

ಮಾನವನ ಜೀವನದಲ್ಲಿ ಬಡತನ– ಸಿರಿತನ, ಮೇಲ್ಜಾತಿ– ಕೆಳಜಾತಿ, ಮಾಲಿಕ–ಸೇವಕ, ಸ್ಪೃಶ್ಯ–ಅಸ್ಪೃಶ್ಯ, ಸ್ತ್ರೀ–ಪುರುಷ, ವಿಪ್ರ–ಅಂತ್ಯಜ ಮುಂತಾದವು ಆತನು ಹಿಂದಿನ ಜನ್ಮದಲ್ಲಿ ಮಾಡಿದ ಪಾಪ–ಪುಣ್ಯದ ಕಾರ್ಯಗಳ ಫಲವಾಗಿ ಈ ಜನ್ಮದಲ್ಲಿ ಜನಿಸಿರುವನೆಂದು ಸ್ವಾರ್ಥಿಗಳು–ಕಪೋಲ ಕಲ್ಪಿತ ವಿಚಾರಗಳ ಮೇಲೆ ಕರ್ಮಸಿದ್ಧಾಂತವನ್ನು ರೂಪಿಸಿಕೊಂಡು, ಜನರಲ್ಲಿ ಬೇರೂರಿಸಿದ್ದರು. ಮಾನವ–ಮಾನವರಲ್ಲಿಯ ಈ ಭೇದಗಳು ಸ್ವಾರ್ಥಿ ಮಾನವರು, ಅತಿ ಬುದ್ಧಿವಂತಿಕೆಯಿಂದ ರೂಪಿಸಿದ ಅದ್ಭುತವಾದ ಕಪೋಲ ಕಲ್ಪಿತ ವ್ಯವಸ್ಥೆಯಾಗಿತ್ತು.

ದೇವರು ಹಿಂದಿನ ಜನ್ಮದ ಪುಣ್ಯದ ಫಲವಾಗಿ ಕೆಲವರನ್ನು ಉಚ್ಚಜಾತಿಯಲ್ಲಿ, ಶ್ರೀಮಂತ ಮನೆತನಗಳಲ್ಲಿ, ಪುರುಷನನ್ನಾಗಿ ಹುಟ್ಟಿಸಿದ್ದಾನೆ; ಹಿಂದಿನ ಜನ್ಮದ ಪಾಪದ ಫಲವಾಗಿ ಹಲವರನ್ನು ಕೀಳು ಜಾತಿಯಲ್ಲಿ, ಬಡವರ ಮನೆತನಗಳಲ್ಲಿ, ಸ್ತ್ರೀಯನ್ನಾಗಿ, ಪುರುಷರನ್ನಾಗಿ ಹುಟ್ಟಿಸಿದ್ದಾನೆ ಎಂಬ ಭಯಾನಕ ಭ್ರಮೆಯನ್ನು ಹುಟ್ಟು ಹಾಕಿ, ಶೂದ್ರಾತಿ ಶೂದ್ರರು, ಎಲ್ಲ ವರ್ಣಗಳ ಸ್ತ್ರೀಯರೂ ಸಹ ಗುಲಾಮರಾಗಿ, ದಾಸ–ದಾಸಿಯರಾಗಿ ಮೇಲ್ಜಾತಿಯವರ ಸೇವೆ ಮಾಡಬೇಕೆಂಬ ದುರುದ್ಧೇಶ ದಿಂದಲೇ ಈ ಸಿದ್ಧಾಂತವನ್ನು ಹುಟ್ಟು ಹಾಕಿದ್ದರು.

ಶೂದ್ರಾತಿ–ಶೂದ್ರರು ಈ ಜನ್ಮದಲ್ಲಿ ಕಷ್ಟಪಟ್ಟು ದುಡಿದು ಉಚ್ಚವರ್ಣಿಯರ ಸೇವೆ ಮಾಡಿ, ಪ್ರಾಯಶ್ಚಿತ್ತವಾಗಿ ದಾನ–ಧರ್ಮ–ದಕ್ಷಿಣೆ ನೀಡಿ, ಪುಣ್ಯಗಳಿಸಿ ಸತ್ತು ಹೋದರೆ, ಸ್ವರ್ಗದಲ್ಲಿ ಸುಖ ಅನುಭವಿಸಿ, ಮರಳಿ ಈ ಲೋಕದಲ್ಲಿ ಶ್ರೇಷ್ಠ ಜಾತಿಯಲ್ಲಿ ಜನಸಿ ಬರುವಿರಿಯೆಂಬ ಭ್ರಮೆಯನ್ನು ಬಿತ್ತಿದ್ದರು. ಉಚ್ಚವರ್ಣದ ಬುದ್ಧಿವಂತರು ತಾವು ಮಾತ್ರ ಈ ಜನ್ಮದಲ್ಲಿ ಕಷ್ಟಪಡದೆ ಎಲ್ಲಾ ಪ್ರಕಾರದ ಸ್ವರ್ಗೀಯ ಸುಖ–ಭೋಗಗಳನ್ನು, ಕನಕ–ಕಾಮಿನಿ–ಕೀರ್ತಿಯನ್ನು ಹೊಂದಿ ಭೋಗಾನಂದವನ್ನು ಅನುಭವಿಸುತ್ತಿದ್ದರು.

ಶೂದ್ರಾತಿ–ಶೂದ್ರರಿಗೆ, ದಲಿತ ಪಂಚಮರಿಗೆ ಹಿಂದಿನ ಜನ್ಮದ ಭಯಾನಕ ಪಾಪದ ಕಥೆಗಳನ್ನು ಹೇಳಿ ಭಯಹುಟ್ಟಿಸಿ ; ಮುಂದಿನ ಜನ್ಮದ ಸ್ವರ್ಗದ ಭೋಗದ ಆಸೆಗಳನ್ನು ಹಚ್ಚಿ; ಈ ಪ್ರಸ್ತುತ ಜನ್ಮದಲ್ಲಿ ಹಗಲಿರುಳು ದುಡಿದು, ಕಷ್ಟ–ತೊಂದರೆ ಅನುಭವಿಸುತ್ತಾ ಮೇಲ್ವರ್ಗದವರ ಸೇವೆಯಲ್ಲಿಯೇ ತಮ್ಮ ಜನ್ಮ ಸಾರ್ಥಕವೆಂದು ಭಾವಿಸುವಂತಾಗಿತ್ತು.

ಇಂತಹ ಮಹಾದುರಂತ ಚಿತ್ರಣವನ್ನು ಬಾಲ್ಯದಿಂದಲೇ ನೋಡುತ್ತಾ ಬಂದಿದ್ದ ಮಹಾಮಾನವತಾವಾದಿ, ಸ್ವತಂತ್ರ ವಿಚಾರವಾದಿ ಬಸವಣ್ಣನವರು ದೀನ–ದಲಿತರ, ಶೂದ್ರರ, ಸ್ತ್ರೀಯರ ನೆಮ್ಮದಿಯ ಬದುಕಿಗೆ ಮಾರಕವಾಗಿದ್ದ

ಕರ್ಮಸಿದ್ಧಂತವನ್ನು ಅದರ ದುರುಪಯೋಗವನ್ನು ನಿರಸನಗೈದರು.

ಸುಖ ಬಂದರೆ ಪುಣ್ಯದ ಫಲವೆನ್ನೆನು,
ದುಃಖ ಬಂದರೆ ಪಾಪದ ಫಲವೆನ್ನೆನು,
ನೀ ಮಾಡಿದಡೆ ಆಯಿತ್ತೆಂದೆನ್ನೆನು
ನೀ ಮಾಡದಿರ್ದಡೆ ಆಗದೆಂದೆನ್ನೆನು
ಕರ್ಮಕ್ಕೆ ಕರ್ತೃವೇ ಕಡೆಯೆಂದೆನ್ನೆನು
ಉದಾಸೀನವಿಡಿದು ಶರಣೆನ್ನೆನು
ಕೂಡಲಸಂಗಮದೇವಾ
ನೀ ಮಾಡಿದುಪದೇಶವು ಎನಗೀ ಪರಿಯಲ್ಲಿ
ಸಂಸಾರವ ಸವೆಯ ಬಳಸುವೆನು.

ಸುಖ–ದುಃಖಗಳು, ಬಡತನ–ಸಿರಿತನಗಳು, ಕುಲಜ–ಅಂತ್ಯಜ, ಶ್ರೇಷ್ಠ–ಕನಿಷ್ಠ ಮುಂತಾದವು ಇಂದಿನ ಸಮಾಜೋ–ಧಾರ್ಮಿಕ ವ್ಯವಸ್ಥೆಯ ದೋಷಗಳೇ ಹೊರತು, ಅವುಗಳನ್ನು ದೇವರು ಮಾಡಿಲ್ಲ ಎಂದು ಸ್ಪಷ್ಟವಾಗಿ ಹೇಳಿ, ಮಿಥ್ಯಾ ವಿಚಾರಗಳ ಕರ್ಮಸಿದ್ಧಾಂತವನ್ನು ನಿರಸನಗೈದರು.

### xii) ಹಣೆಬರಹ–ದೈವವಾದಗಳ ನಿರಸನ :

'ನಮ್ಮ ಹಣೆಬರಹ ಕೆಟ್ಟದ್ದು, ಏನು ಮಾಡೋದು ನಮ್ಮ ದೈವನ ಸುಮಾರಾದ' ಮುಂತಾದ ಅಂಥ ವಿಶ್ವಾಸಗಳನ್ನು ಬಸವಾದಿ ಶರಣರು ಜನಮಾನಸದಿಂದ ಕಿತ್ತು ಹಾಕಲು ಪ್ರಯತ್ನಿಸಿದರು.

ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು
ಜೀವನೋಪಾಯಕ್ಕಂಜಿ 'ಈಯಯ್ಯಾ' ಎನ್ನೆನು
'ಯದ್ ಭಾವಂ ತದ್ ಭವತಿ'
ಉರಿ ಬರಲಿ, ಸಿರಿ ಬರಲಿ ಬೇಕು ಬೇಡೆನ್ನೆನಯ್ಯಾ
ಆ ನಿಮ್ಮ ಹಾರೆನು, ಮಾನವರ ಬೇಡೆನು
ಆಣೆ, ನಿಮ್ಮಾಣೆ ಕೂಡಲಸಂಗಮದೇವಾ.

ಈ ರೀತಿಯ ವಚನ– ಸಂದೇಶಗಳ ಮೂಲಕ ದುರ್ಬಲ ಮನಸ್ಸಿನ ಮನುಷ್ಯರಿಗೆ ಆತ್ಮ ವಿಶ್ವಾಸ ತುಂಬಿ, ಪುರುಷ ಪ್ರಯತ್ನಕ್ಕೆ ಮಹತ್ವ ನೀಡಿದರು. ಶುದ್ಧ ಭಾವದಿಂದ ಕಾಯಕ ಮಾಡಿದರೆ, ಎಲ್ಲ ಬಯಕೆಗಳೂ ಈಡೇರುತ್ತವೆ. ಎಂದು ಧೈರ್ಯ ಹೇಳಿದರು.

### xiii) ಫಲ ಜ್ಯೋತಿಷ್ಯ-ಲಗ್ನ-ವಿಘ್ನಗಳ ಪಂಚಾಂಗ ನಿರಸನ :

ಜ್ಯೋತಿರ್ ವಿಜ್ಞಾನವು ಒಂದು ಜ್ಞಾನದ ಶಾಖೆಯಾಗಿ ಬೆಳೆದು ಆಕಾಶಕಾಯಗಳು, ಗ್ರಹ- ನಕ್ಷತ್ರಗಳು, ಸೂರ್ಯ ಚಂದ್ರರ ಪರಿಭ್ರಮಣ, ಅವುಗಳಿಂದುಂಟಾಗುವ ಗ್ರಹಣಗಳು, ಹವಾಮಾನ, ಋತು ಮಾನಗಳು, ಇತ್ಯಾದಿ ಅಧ್ಯಯನ-ಸಂಶೋಧನೆಯ ಶಾಸ್ತ್ರವಾಗಿ ಬೆಳೆದು ಬಂದಿತ್ತು. ಕಾಲ ಗತಿಸಿದಂತೆ ಅದು ಫಲ-ಜ್ಯೋತಿಷ್ಯ-ಲಗ್ನ ವಿಘ್ನಗಳ ಪಂಚಾಂಗವಾಗಿ ದುರುಪಯೋಗವಾಗ ತೊಡಗಿತು.

ಜ್ಯೋತಿಷಿಗಳು ಜನರ ಭಯವನ್ನು, ಅನಕ್ಷರತೆಯನ್ನು ಹಣಗಳಿಕೆಗೆ ಬಳಸಿಕೊಳ್ಳತೊಡಗಿದರು. ಅಖಂಡವಾಗಿರುವ ಕಾಲವನ್ನು ರಾಹುಕಾಲ, ಗುಳಿಕಾಲ, ಯಮಗಂಡಕಾಲವಾಗಿ ವಿಭಜಿಸಿದರು. ಪಂಚಾಂಗದ ಮೂಲಕ ಶಕುನ, ಅಪಶಕುನ, ಸುಮುಹೂರ್ತ-ಕುಮುಹೂರ್ತ, ಪಂಚಕ-ಕಂಚುಕಗಳನ್ನು ಹುಟ್ಟುಹಾಕಿ, ಜನರಿಗೆ ಹಲವಾರು ರೀತಿಯ ಪೂಜೆಗಳು ಹೋಮ-ಹವನಗಳು, ದಾನ-ಧರ್ಮಗಳನ್ನು ಮಾಡಬೇಕೆಂದು ಹೇಳತೊಡಗಿದರು. ಜನರು ಇವರ ಸ್ವಾರ್ಥಕ್ಕೆ ಬಲಿಪಶುಗಳಾಗ ತೊಡಗಿದರು. ಬಸವಣ್ಣನವರು ಇಂತಹ ಅನಿಷ್ಟತೆಗಳನ್ನು ನಿರಸನಗೈದು ಹೇಳುತ್ತಾರೆ.

ಲಗ್ನವೆಲ್ಲಿಯದೋ, ವಿಘ್ನವೆಲ್ಲಿಯದೋ ಸಂಗಯ್ಯಾ ?
ದೋಷವೆಲ್ಲಿಯದೋ, ದುರಿತವೆಲ್ಲಿಯದೋ ಸಂಗಯ್ಯಾ ?
ನಿಮ್ಮ ಮಾಣದೇ ನೆನೆವಂಗೆ ಭವಕರ್ಮವೆಲ್ಲಿಯದೋ ಕೂಡಲಸಂಗಯ್ಯಾ?

ಜ್ಯೋತಿಷ್ಯ-ಪಂಚಾಂಗಗಳ ಹೆಸರಿನಲ್ಲಿ ನಡೆಯುತ್ತಿದ್ದ ಮುಗ್ಧ ಜನರನ್ನು ಶೋಷಣೆಯಿಂದ ಪಾರುಮಾಡಿ, ನಿಮ್ಮ ಭವಿಷ್ಯವು ನಿಮ್ಮ ಕೈ-ರಟ್ಟೆಯಲ್ಲಿದೆ. ಚೆನ್ನಾಗಿ ಸತ್ಯಶುದ್ಧ ಕಾಯಕ ಮಾಡಿ, ಸತ್ ಫಲಗಳನ್ನು ಪಡೆಯಿರಿ ಎಂದು ತಿಳಿಸಿ ಹೇಳಿದರು. ಹೊಸದಾದ ಧರ್ಮವ್ಯವಸ್ಥೆಯನ್ನು ರೂಪಿಸಿದರು.

### ಆ) ಸಾಮಾಜಿಕ ಕ್ರಾಂತಿ :

ವಿಶ್ವಗುರು ಬಸವಣ್ಣನವರು ಧಾರ್ಮಿಕರಂಗದಲ್ಲಿ ಕ್ರಾಂತಿ ಮಾಡಿದಂತೆ, ಸಾಮಾಜಿಕ ರಂಗದಲ್ಲಿಯೂ ಅದ್ಭುತ ಕ್ರಾಂತಿಯನ್ನು ಮಾಡಿದರು. ಧಾರ್ಮಿಕವಾಗಿ ಇಷ್ಟಲಿಂಗ ಪರಂಪರೆಯ ವಿಶ್ವಧರ್ಮವೆಂದೆನಿಸಿದ ವಿನೂತನ ಲಿಂಗಾಯತ ಧರ್ಮವನ್ನು ಸ್ಥಾಪಿಸಿದರೆ, ಸಾಮಾಜಿಕ ರಂಗದಲ್ಲಿ 'ಜಾತಿರಹಿತ ಸಮಾಜ'ವನ್ನು ಕಟ್ಟಿ ತೋರಿದರು.

### i) ಚಾತುರ್ ವರ್ಣ-ಜಾತಿ ಪದ್ಧತಿ ನಿರಸನ :

ಬಸವ ಪೂರ್ವಯುಗದಲ್ಲಿ ಭಾರತೀಯ ಸಮಾಜ ವ್ಯವಸ್ಥೆಯು ಚಾತುರ್‌ವರ್ಣ ಧರ್ಮದ ನೇತಾರರ ಕೈಯಲ್ಲಿ ಸಿಲುಕಿ ವಿಕೃತರೂಪ ತಾಳಿದ್ದಿತು.

ಈ ವರ್ಣ ವ್ಯವಸ್ಥೆಯು ಶಿವನಿಂದ ಬೋಧಿಸಲ್ಪಟ್ಟಿದೆಯೆಂದು ಶಿವಾಚಾರ್ಯರು ಅಂದರೆ ಶೈವ ಗುರುಗಳೂ, ವಿಷ್ಣುವಿನಿಂದ ಬೋಧಿಸಲ್ಪಟ್ಟಿದೆ (ಸೃಷ್ಟಿಯಾಗಿದೆ) ಎಂದು ವೈಷ್ಣವ ಆಚಾರ್ಯರು (ಗುರುಗಳೂ) ಹೇಳಿಕೊಂಡು ಅದನ್ನು ತಮ್ಮ ತಮ್ಮ ಸಂಪ್ರದಾಯದವರಲ್ಲಿ ಭದ್ರವಾಗಿ ಬೇರೂರಿಸಿದ್ದರು. ಒಟ್ಟಿನಲ್ಲಿ ಸಮಾಜವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಪ್ರಮುಖ ಜಾತಿಗಳಲ್ಲಿ ವಿಭಜಿತವಾಗಿತ್ತು. ಈ ನಾಲ್ಕು ವರ್ಣಗಳಿಂದ ಬಹಿಷ್ಕೃತರಾದವರು, ಈ ವರ್ಣ ಭೇದವನ್ನು ಒಪ್ಪಕೊಳ್ಳದವರನ್ನು 'ಪಂಚಮ' ವರ್ಣೀಯರೆಂದು, ಅಸ್ಪೃಶ್ಯರೆಂದು, ಅವರ್ಣೀಯರೆಂದು ತಮ್ಮ ಧರ್ಮ-ಸಮಾಜದಿಂದ ಹೊರಹಾಕಿದ್ದರು. ಅವರನ್ನು ಗ್ರಾಮ-ಪಟ್ಟಣಗಳ ಪರಿಸರದಿಂದ ಹೊರಗೆ ಹಾಕಿದ್ದರಿಂದ, ಅವರು ಊರ ಹೊರಗೆ ಕೇರಿಗಳನ್ನು ನಿರ್ಮಿಸಿಕೊಂಡು ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ವೃತ್ತಿಗಳಿಂದ ವಿಭಜಿತವಾಗಿದೆಯೆಂದು, ಗುಣಕರ್ಮಗಳಿಂದ ವಿಭಜಿತವಾಗಿದೆಯೆಂದು ಹೇಳಲ್ಪಡುತ್ತಿದ್ದ ವರ್ಣಪದ್ಧತಿಯು ಕಾಲಾನಂತರದಲ್ಲಿ ಹುಟ್ಟಿನಿಂದಲೇ ಜಾತಿಗಳು ನಿರ್ಧರಿತವಾಗಿದೆಯೆಂದು ಹೇಳತೊಡಗಿದರು. ಭಗವಂತನ ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ, ಪಾದಗಳಿಂದ ಶೂದ್ರರು ಹುಟ್ಟಿದ್ದಾರೆ ಎಂದು ಶಾಸ್ತ್ರ ಬರೆದರು. ಆದರೆ ಅಂತ್ಯಜರು ಎಲ್ಲಿಂದ ಹುಟ್ಟಿದರೆಂದು ಬರೆಯಲೇ ಇಲ್ಲ. ಪ್ರತಿಯೊಂದು ಜಾತಿಗಳಲ್ಲಿ ನೂರಾರು ಉಪಜಾತಿಗಳನ್ನು ಸೃಷ್ಟಿಸಿದರು. ದಲಿತ ಪಂಚಮರಲ್ಲಿ ಹೊಲೆಯ, ಮಾದಿಗ, ಢೋರ, ಸಮಗಾರ, ಮೋಚಿಗ ಎಂದು ಭೇದ ಕಲ್ಪಿಸಿದರು. ಒಟ್ಟಿನಲ್ಲಿ ಭಾರತದ ಸಮಾಜ ವ್ಯವಸ್ಥೆಯು ಸಹಸ್ರ-ಸಹಸ್ರ ಹೋಳುಗಳಾಗಿ ಹೋಗಿತ್ತು. (ಇಂದಿಗೂ ೬೦೦೦ ಮೇಲ್ಪಟ್ಟು ಜಾತಿ-ಉಪಜಾತಿಗಳಿವೆಯೆಂದು ಜಾತಿ ಗಣತಿ ಹೇಳುತ್ತದೆ).

ಹುಟ್ಟಿನಿಂದಲೇ ಬಂದಿದೆ ಎಂಬ ಕಲ್ಪಿತ ಕುಲಜ-ಅಂತ್ಯಜ ಎಂಬ ಜಾತಿ-ಭೇದವನ್ನು ಬಸವಣ್ಣನವರು ತೊಡೆದು ಹಾಕಿದರು.

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ
ಜಲ ಬಿಂದುವಿನ ವ್ಯವಹಾರವೊಂದೇ.
ಆಸೆ-ಆಮಿಷ, ರೋಷ-ಹರುಷ, ವಿಷಯಾದಿಗಳೆಲ್ಲಾ ಒಂದೆ.
ಏನ ನೋದಿ, ಏನ ಕೇಳಿ, ಏನು ಫಲ ?
ಕುಲಜನೆಂಬುದಕ್ಕೆ ಆವುದು ದೃಷ್ಟ ?
ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ।
ಆತ್ಮಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ॥
ಎಂದುದಾಗಿ,
ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ

ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ
ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ ?
ಇದು ಕಾರಣ, ಕೂಡಲಸಂಗಮದೇವಾ
ಲಿಂಗಸ್ಥಲವನರಿದವನೇ ಕುಲಜನು.

ಭಾರತದ ಇತಿಹಾಸದಲ್ಲಿ 'ವರ್ಣಾನಾಂ ಕಿಂ ಪ್ರಯೋಜನಂ ?' ಎಂದು ವೈಜ್ಞಾನಿಕವಾಗಿ, ವೈಚಾರಿಕವಾಗಿ ಪ್ರಶ್ನಿಸಿದ ಏಕೈಕ ಧರ್ಮಗುರು ಬಸವಣ್ಣನವರು. ವೈದಿಕ ಧರ್ಮದ ಪ್ರಾಚೀನ ಋಷಿ ಮುನಿಗಳ ಕುಲ-ಗೋತ್ರಗಳನ್ನು ಕರ್ಮಠ ಜಾತ್ಯಾಂಧ ವಿದ್ವಾಂಸರಿಗೆ ಬಿಚ್ಚಿ ತೋರಿಸಿದರು.

ವ್ಯಾಸ ಬೋಯಿತಿಯ ಮಗ,
ಮಾರ್ಕಂಡೇಯ ಮಾತಂಗಿಯ ಮಗ,
ಮಂಡೋದರಿ ಕಪ್ಪೆಯ ಮಗಳು,
ಕುಲವನರಸದಿರಿಂ ಭೋ !
ಸಾಕ್ಷಾತ್ ಅಗಸ್ತ್ಯ ಕಬ್ಬಿಲ
ದೂರ್ವಾಸ ಮಚ್ಚಿಗ, ಕಶ್ಯಪ ಕಮ್ಮಾರ
ಕೌಂಡಿನ್ಯನೆಂಬ ಋಷಿ ಮೂರು ಭುವನವನರಿಯೆ
ನಾವಿದ ಕಾಣಿಭೊ!
ನಮ್ಮ ಕೂಡಲಸಂಗನ ವಚನವಿಂತೆಂದುದು:
ಶ್ವಪ ಚೋಪಿಯಾದಡೇನು ?
ಶಿವಭಕ್ತನೇ ಕುಲಜಂ ಭೋ.

ಮುಂದುವರೆದು ಪ್ರಶ್ನಿಸುತ್ತಾರೆ-

ಕೊಲುವನೇ ಮಾದಿಗ ?
ಹೊಲಸು ತಿಂಬುವನೇ ಹೊಲೆಯ ?
ಕುಲವೇನೋ ಆವಂದಿರ ಕುಲವೇನೋ ?
ಸಕಲಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲಸಂಗನ ಶರಣರೇ ಕುಲಜರು.

ವರ್ಣಾಶ್ರಮ ಧರ್ಮದ ಶಾಸ್ತ್ರಗಳ ಶಾಸನದಂತೆ ವಿಚಾರ ಮಾಡಿದಾಗ, ಅಂದಿನ ಕಾಲದಲ್ಲಿ ಮಾದಿಗರಿಗೆ, ಹೊಲೆಯರಿಗೆ ಜೀವಂತ ಪ್ರಾಣಿಗಳನ್ನು ಕೊಲ್ಲುವ ಹಕ್ಕಿರಲಿಲ್ಲ. ಅವರು ಏನಿದ್ದರೂ ಸತ್ತ ದನಗಳನ್ನು ಎಳೆದೊಯ್ದು, ಹೊತ್ತೊಯ್ದು ಚರ್ಮ ಸುಲಿದು, ಚಮ್ಮಾವುಗೆ ಮಾಡಿ ಮೇಲ್ಜಾತಿಗಳವರಿಗೆ ಪಾದರಕ್ಷೆಗಳನ್ನು ಕೊಡುವ ಕಾಯಕ ಮಾಡುತ್ತಿದ್ದರು. ಆದ್ದರಿಂದ ಹೊಲೆಯ ಮಾದಿಗರು ಜೀವಂತ ಪ್ರಾಣಿಗಳನ್ನು ಕೊಲ್ಲುವದಾಗಲೀ, ಅವುಗಳ ಮಾಂಸ ತಿನ್ನುವದಾಗಲಿ

ಮಾಡುತ್ತಿರಲಿಲ್ಲ. ಅಂತೆಯೇ ಬಸವಣ್ಣನವರು ವಸ್ತುಸ್ಥಿತಿಯ ಚಿತ್ರಣ ನೀಡುತ್ತಾರೆ.

ಹೊಲೆಯೊಳಗೆ ಹುಟ್ಟಿ ಕುಲವನರಸುವೆ
ಎಲವೋ, ಮಾತಂಗಿಯ ಮಗ ನೀನು
ಸತ್ತುದನು ಎಳೆವನದೆತ್ತಣ ಹೊಲೆಯ ?
ಹೊತ್ತು ತಂದು ನೀವು ಕೊಲುವಿರಿ
ಶಾಸ್ತ್ರವೆಂಬುದು ಹೋತಿಂಗೆ ಮಾರಿ
ವೇದವೆಂಬುದು ನಿಮಗೆ ತಿಳಿಯದು
ನಮ್ಮ ಕೂಡಲಸಂಗನ ಶರಣರು
ಕರ್ಮವಿರಹಿತರು, ಶರಣ ಸನ್ನಿಹಿತರು
ಅನುಪಮ ಚಾರಿತ್ರ್ಯರು
ಅವರಿಗೆ ತೋರಲು ಪ್ರತಿಯಿಲ್ಲವೋ

ಈ ರೀತಿಯಾಗಿ ವರ್ಣಭೇದ, ಜಾತಿಭೇದ ನಿರಸನಗೊಳಿಸಿ ಜಾತಿರಹಿತ ಸಮಾಜ ಕಟ್ಟಿದರು.

### ii) ಆಶ್ರಮ ಪದ್ಧತಿ (ಸಂನ್ಯಾಸ) ನಿರಸನ :

ಪ್ರಾಚೀನ ಕಾಲದ "ಆಶ್ರಮ' ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ತ, ಸನ್ಯಾಸ ಎಂಬ ಚತುರಾಶ್ರಮ ಪದ್ಧತಿಯು ಬ್ರಾಹ್ಮಣ, ಕ್ಷತ್ರಿಯರಿಗೆ ಮಾತ್ರ ಇದ್ದು, ಬಹುಸಂಖ್ಯಾತ ವೈಶ್ಯ, ಶೂದ್ರ, ಅಂತ್ಯಜರಿಗೆ ಇದು ಇರಲಿಲ್ಲ. ಬ್ರಹ್ಮಚರ್ಯಾಶ್ರಮವು ವಿದ್ಯಾರ್ಜನೆಗೆ ಎಂದು ಹೇಳಿದ್ದು, ಅದು ಕೇವಲ ಮೇಲ್ಜಾತಿಯವರಿಗೆ (ಎರಡು ವರ್ಣದವರಿಗೆ- ಬ್ರಾಹ್ಮಣರಿಗೆ ವೇದಾಧ್ಯಯನ, ಕ್ಷತ್ರಿಯರಿಗೆ ಶಸ್ತ್ರಾಭ್ಯಾಸ ಕಲಿಕೆ) ಮೀಸಲಾಗಿತ್ತು. ಉಳಿದವರಿಗೆ ಇದು ಅನ್ವಯವಾಗುವದಿಲ್ಲವೆಂಬುದನ್ನರಿತ ಬಸವಣ್ಣನವರು, ಸಕಲ ಮಾನವರೆಲ್ಲರಿಗೂ(ಸ್ತ್ರೀ-ಪುರುಷ, ವಿಪ್ರ-ಅಂತ್ಯಜ ಭೇದವಿಲ್ಲದೆ) ಅನ್ವಯವಾಗುವಂತೆ ಸಹಜವಾದ **ಅಕ್ಷರಜ್ಞಾನ ದಾಸೋಹ** ವ್ಯವಸ್ಥೆ ರೂಪಿದರು. ಪ್ರತಿಯೊಬ್ಬರೂ ಆ ಬಾಲ-ವೃದ್ಧರಾದಿಯಾಗಿ ಇಷ್ಟಲಿಂಗ ಸಂಸ್ಕಾರ ಹೊಂದಿ ಬಾಲ್ಯ, ಯೌವನ, ಪ್ರೌಢ, ವೃದ್ಧಾಪ್ಯಗಳನ್ನು-ಸದ್ ಗೃಹಸ್ಥರಾಗಿ ವಿದ್ಯಾಭ್ಯಾಸ-ಸಂಸಾರ ಜೀವನ-ಲಿಂಗಾಂಗಯೋಗದ ಆನಂದವನ್ನು ಬಾಳಿನುದ್ದಕ್ಕೂ ಅನುಭವಿಸಬೇಕು. ಅಂತೆಯೇ ಅವರು ಸಂಸಾರದಿಂದ ವಿಮುಖರಾಗಿ ಪಲಾಯನವಾದಿಗಳಾಗುವುದನ್ನು ನಿರಸನಗೊಳಿಸಿದರು.

'ಸಂಸಾರ ಕನಿಷ್ಠ, ಸಂನ್ಯಾಸ ಶ್ರೇಷ್ಠ' ಎಂದು ಭಾವ ಭ್ರಮೆಗೊಳಗಾಗಿದ್ದ ಕಪಟ, ಆತ್ಮವಂಚನೆಯ, ಆಷಾಢಭೂತಿಗಳ ಕುರಿತು ಬಸವಣ್ಣನವರು ಅವರಲ್ಲಿರುವ ತಪ್ಪು ಗ್ರಹಿಕೆಗಳನ್ನು ಬಿಡಿಸುತ್ತಾರೆ.

ಇಂದ್ರಿಯ ನಿಗ್ರಹವ ಮಾಡಿದಡೆ ಹೊಂದುವವು ದೋಷಗಳು
ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು !
ಸತಿ ಪತಿ ರತಿ ಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು ?
ಸತಿ ಪತಿ ರತಿ–ಸುಖ ಭೋಗೋಪಭೋಗವ, ವಿಲಾಸವ
ಬಿಟ್ಟನೆ ಸಿಂಧೂ ಬಲ್ಲಾಳನು ?
ನಿಮ್ಮ ಮುಟ್ಟಿ ಪರಧನ–ಪರಸತಿಯರಿಗೆಳಸಿದಡೆ
ನಿಮ್ಮಾಚಾರಕ್ಕೆ ದೂರ, ಕೂಡಲಸಂಗಮದೇವ.

'ನಿಮ್ಮಾಚಾರ' ವೆಂದರೆ ದೇವ ನಿಯಮ. ನಿಸರ್ಗದಲ್ಲಿ ಜನಿಸಿ ಬಂದ ಮಾನವನೂ ಕೂಡ ಸಹಜವಾದ ಸತಿ–ಪತಿ(ಮದುವೆಯಾಗಿ) ಸಂಸಾರ ಜೀವನ ಬಾಳಬೇಕು. ಇಂದ್ರಿಯಗಳನ್ನು ನಿಗ್ರಹಿಸಿದರೆ, ಅವು ಇನ್ನಷ್ಟು ಉಲ್ಬಣಗೊಂಡು ಸಮಾಜದಲ್ಲಿ ವಿಕೃತ ಕಾಮಕ್ಕೆಳಸಿ ಪರಸ್ತ್ರೀಯರಿಗಾಗಿ ಹಪಹಪಿಸುತ್ತವೆ. ಎಲ್ಲೆಡೆ ಅನೀತಿ ಹೆಚ್ಚುತ್ತದೆ. ಆದ್ದರಿಂದ ನೀತಿಯುತ ಗೃಹಸ್ಥ ಜೀವನವನ್ನು ಬಾಳಬೇಕು.

ಆಧ್ಯಾತ್ಮಸಾಧನೆಗೆ, ಜೀವಾತ್ಮನ ಮುಕ್ತಿಗೆ ದಾಂಪತ್ಯ ಜೀವನವು ಬಾಧಕವಲ್ಲ, ಸಾಧಕವೆಂದು ಬಸವಣ್ಣನವರು ಸಾಧಿಸಿ, ತೋರಿದರು.

ಹುಳಿವಿಡಿದು ಘೃತವ ಕಾಣುವಂತೆ
ಅಕ್ಷರವಿಡಿದು ವಿದ್ಯೆಯನರಿವಂತೆ
ಅನ್ನವ ಭೋಗಿಸಿ ಚೈತನ್ಯವ ಕೊಂಬಂತೆ
ಕೂಡಲಸಂಗನ ಶರಣರು
ಸತಿವಿಡಿದು ನಿರ್ವಾಣಸತಿಯ ಕಾಣುವರು
ಕೇಳಾ ಪ್ರಭುವೆ.

ಸಂಸಾರ ಮಾಯೆ, ಹೆಣ್ಣ–ಹೊನ್ನು–ಮಣ್ಣು ಮಾಯೆ ಎಂಬ ಮಾಯಾಭ್ರಮಿತರಿಗೆ ಇದಾವುದೂ ಮಾಯೆಯಲ್ಲ, ನಿಮ್ಮ ನಿಮ್ಮ ಮನದ ಮುಂದಣ 'ಆಶೆಯೇ ಮಾಯೆ' ಎಂದು ಶರಣರು ಸ್ಪಷ್ಟವಾಗಿ ತಿಳಿಸಿ ಹೇಳುತ್ತಾರೆ. ' ಸನ್ಯಾಸಿಯ ಮನದ ಮೊನೆಯ ಮೇಲೆ ಹೆಣ್ಣಿರ್ಪುದಲ್ಲದೆ ಲಿಂಗವಿಲ್ಲ' ಎಂದು ಸನ್ಯಾಸ ವ್ಯವಸ್ಥೆಯನ್ನೇ ನಿರಸನ ಗೈಯುತ್ತಾರೆ ಶರಣರು. ಸನ್ಯಾಸ ಎಂಬುದು ವ್ಯಾಮೋಹವು ನಿರ್ಮೋಹವಾಗುವ ಮಾನಸಿಕ ಸ್ಥಿತಿಯೇ ಹೊರತು, ಹೆಂಡತಿ–ಮಕ್ಕಳು–ಸಂಸಾರ ಬಿಟ್ಟು ಓಡಿ ಹೋಗುವ ಪಲಾಯನವಾದವಲ್ಲ ಎಂದು ಹೇಳುತ್ತಾರೆ.

ಸಂಸಾರವೆಂಬ ಅಡವಿಯಲ್ಲಿ
ಹುಲಿಯುಂಟು, ಕರಡಿಯುಂಟು
ಶರಣನಂಜ, ಮಹಾಧೀರ ಶರಣನಂಜ
ಕೂಡಲ ಸಂಗನ ಶರಣಂಗೆ ನಿರ್ಭಯ

ಎನ್ನುತ್ತಾರೆ ಬಸವಣ್ಣನವರು. ಜೀವನದಲ್ಲಿ ಬರುವ ಎಡರು-ತೊಡರುಗಳನ್ನು ಕಷ್ಟ-ಕಾರ್ಪಣ್ಯಗಳನ್ನು ಧೈರ್ಯದಿಂದ ಎದುರಿಸಿ ಬದುಕಬೇಕು.

### iii) ವರ್ಗಭೇದ (ಬಡವ-ಬಲ್ಲಿದ) ನಿರಸನ :

ಬಡವ-ಬಲ್ಲಿದ, ಸೇವಕ-ಮಾಲಕ, ಜಮೀನದಾರ- ಕೂಲಿಕಾರ, ಮುಂತಾದ ಭೇದವು ನಮ್ಮ ಸಮಾಜ ಜೀವನದ ಬಂಡವಾಳಶಾಹಿ ಪದ್ಧತಿಯ ದುಷ್ಪರಿಣಾಮವಾಗಿದೆ. ದುಡಿಯುವವ ಕನಿಷ್ಠ-ದುಡಿಸಿಕೊಳ್ಳುವವ ಶ್ರೇಷ್ಠ ಎಂಬ ತಾರತಮ್ಯವು ಧನದಾಹಿ ಧನಿಕರ ದುರಹಂಕಾರದಿಂದುಂಟಾಗಿದೆ. ಈ ವರ್ಗ-ಭೇದವನ್ನು ಬಸವಣ್ಣನವರು ತೊಡೆದು ಹಾಕಿದರು. ಕಾಯಕ ಜೀವಿಗಳು ಎಂದಿಗೂ ಬಡವರಲ್ಲ ಎಂಬುದು ಬಸವಾದಿ ಶರಣರ ಸಿದ್ಧಾಂತವಾಗಿದೆ.

ಮನೆ ನೋಡಾ ಬಡವರು, ಮನ ನೋಡಾ ಘನ.
ಸೋಂಕಿನಲ್ಲಿ ಶುಚಿ, ಸರ್ವಾಂಗ ಕಲಿಗಳು
ಪಸರಕ್ಕನುವಿಲ್ಲ, ಬಂದ ತತ್ಕಾಲಕ್ಕುಂಟು
ಕೂಡಲಸಂಗನ ಶರಣರು ಸ್ವತಂತ್ರಧೀರರು.

ಈ ರೀತಿಯಾಗಿ ಬಸವಣ್ಣನವರು ದೀನ-ದಲಿತರಲ್ಲಿ, ದುಡಿಯುವ ಜನರಲ್ಲಿ ಸ್ವಾಭಿಮಾನ ತುಂಬಿದರು. ದುಡಿಯುವವರು ಸ್ವಾವಲಂಬಿಗಳು, ದುಡಿವವರ ದುಡಿಮೆಯ ಮೇಲೆ ಅವಲಂಬಿಸಿರುವವರು ಪರಾವಲಂಬಿಗಳು. ಪ್ರತಿಯೊಬ್ಬರೂ ಕಾಯಕ ಜೀವಿಗಳಾದಾಗ ವರ್ಗಭೇದ ತಾನಾಗಿಯೇ ಅಳಿಯುತ್ತದೆ ಎಂಬುದನ್ನು ತೋರಿಸಿಕೊಟ್ಟರು.

### iv) ಲಿಂಗಭೇದ (ಸ್ತ್ರೀ-ಪುರುಷ ಭೇದ) ನಿರಸನ :

ಸಾವಿರಾರು ವರುಷಗಳಿಂದ ಪುರುಷ ಪ್ರಧಾನ ಚಾತುರ್ ವರ್ಣ ಸಮಾಜ ವ್ಯವಸ್ಥೆಯಲ್ಲಿ ಎಲ್ಲ ವರ್ಣಗಳ ಸ್ತ್ರೀಯರನ್ನು 'ನ ಸ್ತ್ರೀ ಸ್ವಾತಂತ್ರ್ಯಮ್ ಅರ್ಹತಿ' ಎಂದು ಅವಳ ಸ್ವಾತಂತ್ರ್ಯ ಹರಣಮಾಡಿ, ಅವಳನ್ನು ಪತಿಯ ದಾಸಿ ಎಂಬಂತೆ ದುಡಿಸಿಕೊಳ್ಳುತ್ತಲೇ ಬಂದಿದ್ದರು. ತವರು ಮನೆಯಲ್ಲಿಯೂ 'ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ' ಎಂಬ ಭಾವನೆ ಬಲವಾಗಿ ಬೇರೂರಿತ್ತು. ಕನ್ಯಾದಾನ ಮಾಡಿ ಕೈತೊಳೆದುಕೊಂಡಾಗ ತಮ್ಮ ಭಾರ ಇಳಿಯಿತು ಎಂದು ಭಾವಿಸುತ್ತಿದ್ದರು. ಗಂಡನ ಮನೆಗೆ 'ದಾನದ ವಸ್ತು'ವಾಗಿ ಬಂದವಳು ಭೋಗದ ವಸ್ತುವಾಗಿ, ಮಕ್ಕಳನ್ನು ಹೆರುವ ಯಂತ್ರವಾಗಿ, ಗಂಡನ ಮನೆಯಲ್ಲಿ ಪುಕ್ಕಟೆಯಾಗಿ ದುಡಿಯುವ ಹೆಣ್ಣಾಳಾಗಿ ಬದುಕಬೇಕಿತ್ತು. ಅವಳಿಗೆ ಗಂಡಸಿನಂತೆ ಆಸ್ತಿಯ ಪಾಲಾಗಲೀ, ಸಮಾಜದಲ್ಲಿ ಸ್ಥಾನ-ಮಾನಗಳಾಗಲೀ ಇರಲಿಲ್ಲ. ಇಂತಹ ಹೀನ ಪರಿಸ್ಥಿತಿಯ ಅಸಮಾನತೆಯ

ಸಮಾಜದಲ್ಲಿ ಸ್ತ್ರೀಯ ಬಾಳು ಗೋಳಾಗಿತ್ತು. 'ಮಾತೃದೇವೋ ಭವ' ಎಂಬುದು ಧಾರ್ಮಿಕ ಗ್ರಂಥಗಳಲ್ಲಿಯ ಒಂದು ವಾಕ್ಯವಾಗಿತ್ತೇ ಹೊರತು, ವಾಸ್ತವದಲ್ಲಿ 'ನಾರಿ ನರಕಕ್ಕೆ ದಾರಿ' ಎಂಬ ಭಯಾನಕ ಆಚರಣೆ ಜಾರಿಯಲ್ಲಿತ್ತು. ಇಂತಹ ದಾರುಣ ಸ್ಥಿತಿಯಲ್ಲಿದ್ದ ಸ್ತ್ರೀಕುಲಕ್ಕೆ ಮಹಾಬೆಳಕಾಗಿ ಬಂದವರು ಗುರು-ಬಸವಣ್ಣನವರು.

ಸಮಾಜ ಜೀವನದ ಎಲ್ಲ ರಂಗಗಳಲ್ಲಿ ಲಿಂಗಭೇದ ತೊಡೆದು ಹಾಕಿ ಸ್ತ್ರೀ-ಪುರುಷರಿಬ್ಬರೂ ಸಮಾನರು ಎಂದು ಸಮಾಜೋ-ಧಾರ್ಮಿಕ-ಕಾನೂನು ಜಾರಿಗೆ ತಂದರು. ಅನುಭವ ಮಂಟಪದ ಚರ್ಚೆಯಲ್ಲಿ ಮುಕ್ತ ಅವಕಾಶ ನೀಡಿದರು. ಅಂತೆಯೇ ಬಸವಣ್ಣನವರು 'ಪ್ರಪಂಚದ ಪ್ರಪ್ರಥಮ ಸ್ತ್ರೀ ಕುಲೋದ್ಧಾರಕ ಗುರು' ಎಂದು ಸ್ತುತಿಸಲ್ಪಟ್ಟಿದ್ದಾರೆ.

### v) ಅಸ್ಪೃಶ್ಯತೆ-ಪಂಚಮವರ್ಣ ನಿರಸನ :

ಚಾತುರ್ ವರ್ಣ ಸಮಾಜ ವ್ಯವಸ್ಥೆಯು ಕಾಲಾನಂತರದಲ್ಲಿ ಪಟ್ಟಭದ್ರರ ಹಿತಾಸಕ್ತಿ-ಸ್ವಾರ್ಥದಿಂದಾಗಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ವರ್ಣಗಳಿಂದ ಹೊರತಾದ ಪಂಚಮವರ್ಣವನ್ನು ಹುಟ್ಟು ಹಾಕಿತು. ಊರೊಳಗೆ ಕುಲಜರ ಓಣಿಗಳು, ಊರ ಹೊರಗೆ ಅಂತ್ಯಜರ ಕೇರಿಗಳು (ಅಂದಿನ ಕಾಲದಲ್ಲಿ ಹೊಲೆಯರ, ಮಾದಿಗರ, ಡೋಹರ, ಸಮಗಾರರ, ಮೋಚಿಗರ ಭಿನ್ನ ಭಿನ್ನ ಕೇರಿಗಳು) ನಿರ್ಮಾಣವಾಗಿದ್ದವು. ಇವರನ್ನು ಅಸ್ಪೃಶ್ಯರೆಂದು ಕರೆಯಲಾಯಿತು. ಈ ಅಸ್ಪೃಶ್ಯರನ್ನು ಮುಟ್ಟಬಾರದು, ಮುಟ್ಟಿಸಿಕೊಳ್ಳಬಾರದು ಎಂಬ ಕಟ್ಟಳೆ ಜಾರಿಗೆ ತಂದಿದ್ದರು.

ಇಂತಹ ಅತಿ ಹೇಯವಾದ ಸಮಾಜೋ-ಧಾರ್ಮಿಕ ಕಲಂಕವನ್ನು ತೊಡೆದು ಹಾಕಲು **'ಸಾಮಾಜಿಕ ನ್ಯಾಯ'**ವನ್ನು ಶೂದ್ರರು, ಪಂಚಮವರ್ಣಿಯರಿಗೆ ಕಲ್ಪಿಸಿದ ಮಹಾಮಾನವತಾವಾದಿ, ಅಸ್ಪೃಶ್ಯೋದ್ಧಾರಕರು ಬಸವಣ್ಣನವರು. ಅಂತೆಯೇ ಜನಪದರು ಹೃದಯ ತುಂಬಿ ಹಾಡಿದರು.

ಹೊಲೆಯ-ಮಾದಿಗರೆಂಬ ಬಲೆಯಾತ ಕಿತ್ತೊಗೆದ
ಭಳಿರೆ ಬಸವಯ್ಯ ಬಸವರಸ । ನಿನ್ಹೆಸರು
ನೆಲೆಯಾತು ನಿತ್ಯ ಜನಪದಕೆ ॥

ಬಸವಣ್ಣನವರು, ಸಹಸ್ರಾರು ವರುಷಗಳಿಂದ ದೂರವಿಟ್ಟಿದ್ದ ಅಸ್ಪೃಶ್ಯ ಜನಾಂಗದವರನ್ನು ಅಪ್ಪಿಕೊಂಡರು. "ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೊಹರ ಕಕ್ಕಯ್ಯ, ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯಾ, ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ" ಎಂದು ಅವರೆಲ್ಲರ ಕೇರಿಗಳಿಗೆ, ಗುಡಿಸಲುಗಳಿಗೆ ಹೋಗಿ ಅವರಿಗೆಲ್ಲ ಧಾರ್ಮಿಕ ಸಂಸ್ಕಾರ ಕರುಣಿಸಿ, ಅವರಲ್ಲಿ ಅಂಬಲಿ ಪ್ರಸಾದ ಸ್ವೀಕರಿಸಿದರು.

ಅವರಿಗೆಲ್ಲ ಕಾಯಕಗೌರವ–ಕಾಯಕದೈವತ್ವವನ್ನು ತಿಳಿಸಿ ಹೇಳಿದರು. ಸ್ವಾವಲಂಬನೆ, ಸ್ವಾಭಿಮಾನ, ಸಾಮಾಜಿಕ ಸಮಾನತೆಯುಂಟು ಮಾಡಿದರು.

'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ, ಜಲವೊಂದೆ ಶೌಚಾಚಮನಕ್ಕೆ ಕುಲವೊಂದೇ ತನ್ನತಾನರಿದವಂಗೆ' ಎಂದು ಮನಮುಟ್ಟುವಂತೆ ತಿಳಿಸಿ ಹೇಳಿದರು.

ಇವನಾರವ, ಇವನಾರವ, ಇವನಾರವ
ಎಂದೆನಿಸದಿರಯ್ಯಾ,
ಇವನಮ್ಮವ, ಇವನಮ್ಮವ, ಇವನಮ್ಮವ
ಎಂದೆನಿಸಯ್ಯಾ,
ಕೂಡಲಸಂಗಮದೇವಾ
ನಿಮ್ಮ ಮನೆಯ ಮಗನೆಂದೆನಿಸಯ್ಯಾ.

ಬಸವಣ್ಣನವರ ಈ ಅನುಭಾವದ ವಚನವು **'ವಿಶ್ವಬಂಧುತ್ವ' 'ವಿಶ್ವಮಾನವತೆಯ'**ನ್ನು ಬಿಂಬಿಸುತ್ತದೆ. ಬಸವಣ್ಣನವರಂತೆ ಪ್ರತಿಯೊಬ್ಬರೂ ಈ ವಿಶ್ವದ ಮಾನವರನ್ನು ದೇವರ ಮಹಾಮನೆಯ ಮಕ್ಕಳೆಂದು ಭಾವಿಸಿದಾಗ ಮಾತ್ರ ವಿಶ್ವಭ್ರಾತೃತ್ವ ಸಾಧಿಸಲ್ಪಡುತ್ತದೆ. ನಾವೆಲ್ಲರೂ ದೇವರ ಅಂಶಿಕರಾದುದರಿಂದ ದೇವರ ಮಕ್ಕಳು, ದೇವರ ಮಕ್ಕಳಾದ ನಾವು ಸರ್ವರೂ ಸಹೋದರರು ಎಂದು ಅರಿತು, ಶರಣರಾಗಿ ಬಾಳಬೇಕು, ಅಂದಾಗ ಮಾತ್ರ ಪಂಚಮವರ್ಣ–ಅಸ್ಪೃಶ್ಯತೆ ನಿರಸನವಾಗಿ 'ಮಾನವಕುಲವೆಲ್ಲ ಒಂದು' ಎಂಬ ಭಾವನೆ ಭದ್ರವಾಗುತ್ತದೆ.

### ಇ) ಆರ್ಥಿಕ ಕ್ರಾಂತಿ :

ಯಾವುದೇ ಒಂದು ದೇಶವು ಅಭಿವೃದ್ಧಿ ಹೊಂದಿ, ಅಲ್ಲಿಯ ಪ್ರಜೆಗಳು ಆರ್ಥಿಕವಾಗಿ ಸದೃಢರಾಗಿ–ಶಿವಪಂಚಾಯತ (ಅನ್ನ, ಅರಿವೆ, ಆಶ್ರಯ, ಅರಿವು (ಶಿಕ್ಷಣ) ಹಾಗೂ ಔಷಧ) ಹೊಂದಿ ನೆಮ್ಮದಿಯ ಜೀವನ ಬಾಳಬೇಕಾದರೆ. ಪ್ರತಿಯೊಬ್ಬರೂ ಒಂದಿಲ್ಲೊಂದು ಉದ್ಯೋಗ ಮಾಡಲೇಬೇಕಾಗುತ್ತದೆ. ಅಂತೆಯೇ ಬಸವಣ್ಣನವರು ವ್ಯಷ್ಟಿ–ಸಮಷ್ಟಿಯ ಕಲ್ಯಾಣಕ್ಕಾಗಿ ಮೂರು ತತ್ವ–ಸಿದ್ಧಾಂತಗಳನ್ನು ರೂಪಿಸಿ, ಅನುಷ್ಠಾನಕ್ಕೆ ತಂದರು. ತನ್ಮೂಲಕ ಅವರೊಬ್ಬ ಶ್ರೇಷ್ಠ ಅರ್ಥಶಾಸ್ತ್ರಜ್ಞ–ರೆಂಬುದನ್ನು ಜಗತ್ತೇ ಅರಿಯುವಂತಾಗಿದೆ.

### i) ಕಾಯಕ ತತ್ವ–ಸಿದ್ಧಾಂತ :

'ಕಾಯಕ' ತತ್ವವು ಸತ್ಯ–ಶುದ್ಧವಾಗಿರಬೇಕು. 'ಕಾಯಕ'ದಲ್ಲಿ ಮೋಸ, ವಂಚನೆ, ಕಪಟ, ಹುಸಿ, ಹಿಂಸೆ ಇರಬಾರದು. ಪ್ರತಿಯೊಬ್ಬರೂ ಸತ್ಯ ಶುದ್ಧ ಕಾಯಕ ಮಾಡಲೇಬೇಕು.

ಸಮಾಜ ಜೀವನದಲ್ಲಿ ದುಡಿಮೆಯ ಬಗ್ಗೆ ಅನೇಕ ತಪ್ಪು ಗ್ರಹಿಕೆಗಳಿದ್ದವು. ದುಡಿಯುವವ ಕೀಳು, ದುಡಿಯದೇ ತಿನ್ನುವವ ಮೇಲು; ದುಡಿಯುವವ ಶೂದ್ರ, ದುಡಿಯದೇ ಇರುವವ ಕುಲಜ, ವೃತ್ತಿಗಳಲ್ಲಿಯೂ ಕೂಡ ಶ್ರೇಷ್ಠ-ಕನಿಷ್ಠ ಎಂಬ ತಾರತಮ್ಯ ಮಾಡಿಕೊಂಡು ಬರಲಾಗಿತ್ತು. ದುಡಿಮೆಯು ಕೇವಲ ಹೊಟ್ಟೆ ತುಂಬಿಸುವ, ಉದರಂಭರಣೆಯ, ಉಪಜೀವನದ ಮಾಧ್ಯಮವಾಗಿತ್ತು.

ಇಂತಹ ಕುಯುಕ್ತಿಯಿಂದಾಗಿ ಸವರ್ಣೀಯರು ಶೂದ್ರಾತಿಶೂದ್ರರನ್ನು ನಿರಂತರವಾಗಿ ದುಡಿಸಿಕೊಳ್ಳುತ್ತಾ, ಅವರ ದುಡಿಮೆಯ ಫಲವನ್ನು ಐಷಾರಾಮಿ ಭೋಗಕ್ಕೆ ಬಳಸಿಕೊಳ್ಳುತ್ತಿದ್ದರು. ದುಡಿಯುವವರು ಬಡತನದಲ್ಲಿ ಬೇಯುತ್ತಿದ್ದರು, ದುಡಿಸಿಕೊಳ್ಳುವವರು ಶ್ರೀಮಂತಿಕೆಯಲ್ಲಿ ಮೆರೆಯುತ್ತಿದ್ದರು. ಈ ಎಲ್ಲ ಅನ್ಯಾಯ ವಿಕೃತಿಗಳನ್ನು ತೊಡೆದು ಹಾಕಲು ಬಸವಣ್ಣನವರು ಪ್ರತಿಪಾದಿಸಿದ ವಿನೂತನ ಸಿದ್ಧಾಂತವೇ-**ಕಾಯಕ ಸಿದ್ಧಾಂತ**.

ಆರೋಗ್ಯವಂತ-ಸದೃಢವಾಗಿರುವ ಪ್ರತಿಯೊಬ್ಬ ಪ್ರಜೆಯೂ ಸತ್ಯಶುದ್ಧ ಕಾಯಕ ಮಾಡಲೇಬೇಕು. ಗುರು-ಲಿಂಗ-ಜಂಗಮವೂ ಕಾಯಕ ಮಾಡಲೇಬೇಕು. ಕಾಯಕ ತತ್ವವು ದುಡಿಮೆಗೆ ಗೌರವ ಹಾಗೂ ದೈವತ್ವ ತಂದುಕೊಟ್ಟಿದ್ದರಿಂದ **'ಕಾಯಕವೇ ಕೈಲಾಸ'** ಎಂಬ ಹೊಸ ಘೋಷಣೆ ಕಲ್ಯಾಣ ಸಾಮ್ರಾಜ್ಯದಲ್ಲಿ ಮೊಳಗುವಂತಾಯಿತು.

ನಾನು ಆರಂಬವ ಮಾಡುವೆನಯ್ಯಾ
ಗುರು ಪೂಜೆಯೆಂದು
ನಾನು ವ್ಯವಹಾರವ ಮಾಡುವೆನಯ್ಯಾ
ಲಿಂಗಾರ್ಚನೆಯೆಂದು
ನಾನು ಪರಸೇವೆಯ ಮಾಡುವೆನಯ್ಯಾ
ಜಂಗಮದಾಸೋಹವೆಂದು
ನಾನಾವಾವ ಕರ್ಮಂಗಳ ಮಾಡಿದಡೆಯು
ಆ ಕರ್ಮ ಫಲ ಭೋಗವ ನೀ ಕೊಡುವೆ
ಎಂಬುದ ನಾನು ಬಲ್ಲೆನು
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು.
ನಿಮ್ಮ ಸೊಮ್ಮಿಂಗೆ ಸಲಿಸುವೆನು
ನಿಮ್ಮಾಣೆ ಕೂಡಲಸಂಗಮದೇವ.

ಈ ರೀತಿಯಾಗಿ ಆರಂಬ (ಕೃಷಿ) ಕಾಯಕ, ವ್ಯವಹಾರ (ವ್ಯಾಪಾರ) ಕಾಯಕ, ಪರಸೇವೆ (ಯಾವುದೇ ಪ್ರಕಾರದ ಕಸಬುಗಳು) ಕಾಯಕ ಇವನ್ನು

ಗುರು-ಲಿಂಗ-ಜಂಗಮ ಪೂಜೆಯೆಂದು ಮಾಡಿದಾಗ ಮಾತ್ರ ಅದು 'ಕಾಯಕ ದೈವತ್ವ' ವಾಗುತ್ತದೆ. ಪೂಜೆ ಮಾಡುವುದೇ ಕಾಯಕವಲ್ಲ, ಕಾಯಕವೇ ಪೂಜೆಯಾಗಬೇಕು ಎಂಬ ಸಿದ್ಧಾಂತ ಇಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಒಬ್ಬ ಚಮ್ಮಾರನ ಕಾಯಕ ಮೊದಲ್ಗೊಂಡು ಪ್ರಧಾನಿ ಕಾಯಕದವರೆಗೆ ಎಲ್ಲ ಕಾಯಕಗಳಿಗೂ ಸಮಾನ ಗೌರವ ಇರಬೇಕು. ಕಾಯಕಗಳು ಭಿನ್ನ ಭಿನ್ನವಾಗಿದ್ದರೂ. ಅವು ರಾಷ್ಟ್ರದ ಅಭಿವೃದ್ಧಿಗೆ ತಳಹದಿಯಾಗಿರಬೇಕು. ಇನ್ನು, ಕಾಯಕಗಳಲ್ಲಿ ಕುಲ-ಜಾತಿಗಳನ್ನು ಎಣಿಸಬಾರದು. ಒಬ್ಬ ವ್ಯಕ್ತಿ ಯಾವುದೇ ಜಾತಿ-ಕುಲದಲ್ಲಿ ಜನಸಿದ್ದರೂ ಕೂಡ, ತನ್ನ ಆಸಕ್ತಿ ಮತ್ತು ಪ್ರತಿಭೆಗಳಿಂದ ತನಗೆ ಸೂಕ್ತವಾದ ಕಾಯಕವನ್ನು ಆಯ್ಕೆ ಮಾಡಿಕೊಂಡು ಬದುಕಬೇಕು.

'ಕಾಯಕಗಳಲ್ಲಿ ಕುಲವನೆಣಿಸುವ ಎಲ್ಲವೋ ಮಾತಂಗಿಯ ಮಗ ನೀನು' ಎಂದು ಬಸವಣ್ಣನವರು ನಿಷ್ಠುರವಾಗಿ ಖಂಡಿಸಿದ್ದಾರೆ. ಆದ್ದರಿಂದ ಪ್ರತಿಯೊಬ್ಬರೂ ಸತ್ಯಶುದ್ಧವಾಗಿ ಕಾಯಕ ಮಾಡಿ ಗಳಿಸಬೇಕು. ಅಂದಾಗ ಬಡತನ ಇರುವುದೇ ಇಲ್ಲ. ಕಾಯಕ ಜೀವಿಗಳೆಲ್ಲ ಹೃದಯ ಶ್ರೀಮಂತಿಕೆಯುಳ್ಳವರಾಗಿರುತ್ತಾರೆ. ಕಾಯಕ ಜೀವಿಗಳೇ ಸಮೃದ್ಧ ರಾಷ್ಟ್ರದ ಬೆನ್ನೆಲುಬು ಎಂದು ತಿಳಿಸಿದರು.

## ii) ದಾಸೋಹ ತತ್ವ ಸಿದ್ಧಾಂತ :

ಬಸವ ಪೂರ್ವದಲ್ಲಿ **ದಾನಪದ್ಧತಿ**- ಅಚರಣೆಯಲ್ಲಿತ್ತು. ರಾಜ ಮಹಾರಾಜರು, ವ್ಯಾಪಾರಸ್ಥ ಧನಿಕರು, ಜಮೀನುದಾರರು ಪ್ರಜೆಗಳ, ಬಡವರ, ಶೂದ್ರಾತಿ ಶೂದ್ರರ ದುಡಿಮೆಯ ಹಣವನ್ನು ಕೊಳ್ಳೆಹೊಡೆದು, ಶೋಷಣೆ ಮಾಡಿ ಸಂಗ್ರಹಿಸಿದ್ದ ಸಂಪತ್ತಿನಲ್ಲಿ ಪಾಪ ಪ್ರಜ್ಞೆ ಕಾಡಿದಾಗ, ತಮ್ಮ ಪಾಪ ನಿವಾರಣೆಗಾಗಿ ಅಹಂ ತೋರಿಸಿಕೊಳ್ಳಲೋಸುಗ, ಕೀರ್ತಿವಾರ್ತೆಗಾಗಿ ಸ್ವಲ್ಪ ಭಾಗವನ್ನು ದಾನ ನೀಡಿ, ಧರ್ಮಾತ್ಮರೆಂದು ತೋರಿಸಿಕೊಳ್ಳುತ್ತಿದ್ದರು. ಈ ದಾನದ ಹಣವು ಅವರ ಸ್ವಂತ ದುಡಿಮೆಯದಾಗಿರದೇ ಪ್ರಜೆಗಳ ದುಡಿಮೆಯ ದುಡ್ಡೇ ಆಗಿರುತ್ತಿತ್ತು. ಇನ್ನು ಕೆಲವರಿಗೆ ತಮ್ಮ ಹೀನ ಕೃತ್ಯಗಳ ಪಾಪಪ್ರಜ್ಞೆ ಕಾಡಿದಾಗ, ಪುರೋಹಿತ-ಪಂಡಿತರನ್ನು ಕೇಳಿ, ಅವರು ಹೇಳಿದ ಪ್ರಕಾರ 'ಪ್ರಾಯಶ್ಚಿತ್ತ' ಮಾಡಿಕೊಳ್ಳಲು ಭೂದಾನ, ವಸ್ತ್ರದಾನ, ಅನ್ನದಾನ, ಹಿರಣ್ಯದಾನ, ಗೋದಾನಗಳನ್ನು ಮಾಡಿಯೋ, ದೇವಾಲಯಗಳನ್ನು ಕಟ್ಟಿಸಿಯೋ ದಾನಿ, ಮಹಾದಾನಿ, ದಾನದುರಂಧರ ಎಂದು ಕರೆಸಿಕೊಳ್ಳುತ್ತಿದ್ದರು.

ಇಂತಹ 'ದಾನ'ದಲ್ಲಿ ನೀಡುವವನಲ್ಲಿ ಅಹಂಕಾರ, ಪಡೆಯುವವನಲ್ಲಿ ದೀನತೆ(ದೈನ್ಯಭಾವ) ಇರುತ್ತಿತ್ತು. ಕೊಡುವವ ಶ್ರೇಷ್ಠ, ಪಡೆಯುವವ ಕನಿಷ್ಠ ಎಂಬ ಭಾವವಿರುತ್ತಿತ್ತು. ಇಂತಹ ಪದ್ಧತಿಯನ್ನು ನಿರಸನಗೈದು ಬಸವಣ್ಣನವರು ಸಮಗೌರವ, ಸಮಾನತೆಯ ವಿನೂತನವಾದ **'ದಾಸೋಹ ತತ್ವ-ಸಿದ್ಧಾಂತ'** ಪ್ರತಿಪಾದಿಸಿದರು.

'ವ್ಯಕ್ತಿಗಿಂತ ಸಮಾಜ ದೊಡ್ಡದು, ವ್ಯಷ್ಟಿಗಿಂತ ಸಮಷ್ಟಿ ದೊಡ್ಡದು'. ಆದ್ದರಿಂದ ಪ್ರತಿಯೊಬ್ಬ ಕಾಯಕ ಜೀವಿಯು ತನ್ನ ಸತ್ಯಶುದ್ಧ ಕಾಯಕದ ಗಳಿಕೆಯನ್ನು ಸಮಾಜದ ದೀನ-ದುಃಖಿಗಳ, ಅಸಹಾಯಕ-ದುರ್ಬಲರ ಸಲುವಾಗಿ ವಿನಯಪೂರ್ವಕವಾಗಿ ತ್ರಿವಿಧ ದಾಸೋಹ ಮಾಡಬೇಕು. 'ಅನ್ನದಾಸೋಹ, ಜ್ಞಾನ ದಾಸೋಹ, ಅನುಭಾವ ದಾಸೋಹ' ಗಳಿಗಾಗಿ ಬಳಕೆ ಮಾಡುವ ತತ್ವಾಚರಣೆಯೇ ದಾಸೋಹವಾಗಿದೆ.

ದಾಸೋಹವೆಂಬ ಸೋಹೆಗೊಂಡು ಹೋಗಿ
ಗುರುವ ಕಂಡೆ, ಲಿಂಗವ ಕಂಡೆ,
ಜಂಗಮವ ಕಂಡೆ, ಪ್ರಸಾದವ ಕಂಡೆ
ಇಂತೀ ಚತುರ್ವಿಧ ಸಂಪನ್ನನಾದೆ ಕಾಣಾ
ಕೂಡಲಸಂಗಮದೇವಾ.

ಈ ಜಗತ್ತಿಗೆ ಇಳೆ, ಬೆಳೆ, ಗಾಳಿ, ಎತ್ತು, ಬಿತ್ತು, ಸಾಗರ ಮುಂತಾದುವನ್ನೆಲ್ಲ ಕರುಣಿಸಿರುವ **'ದೇವನೊಬ್ಬನೇ ಮಹಾದಾನಿಯು'** ಎಂದು ಶರಣರು ಹೇಳುತ್ತಾರೆ. ದೇವರು ಕೊಟ್ಟಿದ್ದನ್ನು ಮಾನವನು ತನ್ನ ಸಹಬಂಧುಗಳಿಗೆ ಮಾಡುವುದು ದಾಸೋಹವೇ ಹೊರತು, ದಾನವಲ್ಲ ಎಂಬುದನ್ನು ಅರಿಯಬೇಕಿದೆ.

ಇನ್ನು ಕೆಲವರು ಅಪಾರ ಹಣ ಸಂಗ್ರಹಿಸಿ ಗುಪ್ತವಾಗಿ ಬಚ್ಚಿಟ್ಟು, ಅದನ್ನು ಬಳಸದೇ ಹಾಗೆಯೇ ಸತ್ತುಹೋಗುತ್ತಾರೆ. ಇಂತಹ ಧನದಾಹಿಗಳಿಗೂ ಬಸವಣ್ಣನವರು ಎಚ್ಚರಿಸಿ, ಅದನ್ನು ಸತ್ಕಾರ್ಯಗಳಿಗೆ ಬಳಸಲು ಹೇಳುತ್ತಾರೆ-

ಆಯುಷ್ಯವುಂಟು, ಪ್ರಳಯವಿಲ್ಲೆಂದು ಅರ್ಥವ ಮಡುಗುವಿರಿ,
ಆಯುಷ್ಯ ತೀರಿ ಪ್ರಳಯ ಬಂದಡೆ ಆ ಅರ್ಥವನುಂಬುವರಿಲ್ಲ.
ನೆಲನನಗೆದು ಮಡುಗದಿರಾ, ನೆಲನುಂಗಿದಡೆ ಉಗುಳುವುದೇ?
ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ ಉಣ್ಣದೇ ಹೋಗದಿರಾ !
ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ
ಕೂಡಲಸಂಗನಶರಣರಿಗೆ ಒಡನೆ ಸವೆಸುವುದು.

ಶರಣರೆಂದರೆ ಜಂಗಮವು. ಶರಣರಿಗೆ ಸಂಪತ್ತು ಸವೆಸಿದರೆ ಅದು ಸಮಾಜ ಕಾರ್ಯಕ್ಕೆ ವಿನಿಯೋಗವಾಗುತ್ತದೆ. ತಮ್ಮ ಇನ್ನೊಂದು ವಚನದಲ್ಲಿ ಬಡ್ಡಿ ವ್ಯವಹಾರ ಮಾಡಿ ಮೋಸದಿಂದ ಹಣ ಗಳಿಸಬಾರದೆಂದು ಹೇಳುತ್ತಾರೆ. ಒಂದು ವೇಳೆ ಕೊಡುವುದಾದರೆ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು. ಯಾಕೆಂದರೆ ಬಂದರೆ ಒಂದು ಲೇಸು, ಬಾರದಿರ್ದಡೆ ಎರಡು ಲೇಸು. ಬಂದರೆ ಇಲ್ಲಿ ದಾಸೋಹಕ್ಕೆ ಸಲ್ಲುತ್ತದೆ. ಬಾರದಿರ್ದಡೆ ಅಲ್ಲಿ ದಾಸೋಹಕ್ಕೆ ಸಂದಿದೆ ಎಂದು ಭಾವಿಸಬೇಕು. ಹೀಗೆ ದಾಸೋಹ ತತ್ವಾಚರಣೆಯಲ್ಲಿ **'ಸಹಕಾರ ತತ್ವ'**ದ ಆಚರಣೆಯನ್ನು ಕಾಣುತ್ತೇವೆ.

ಕಾಯಕ ಮತ್ತು ದಾಸೋಹ ಸಿದ್ಧಾಂತಗಳು ಅನುಷ್ಠಾನಕ್ಕೆ ಬಂದರೆ ಸಮಾಜದಲ್ಲಿ ನಿರುದ್ಯೋಗ ಸಮಸ್ಯೆ ದೂರವಾಗುತ್ತದೆ. ಭಿಕ್ಷುಕತನ ತಾನಾಗಿಯೇ ನಿರ್ಮೂಲನವಾಗುತ್ತದೆ.

### iii) ಪ್ರಸಾದ ತತ್ವ–ಸಿದ್ಧಾಂತ :

ಬಸವಪೂರ್ವಯುಗದಲ್ಲಿ ಗುಡಿ–ಗುಂಡಾರಗಳಲ್ಲಿ ದೇವತಾವಿಗ್ರಹಗಳ ಅರ್ಚನೆ–ಪೂಜೆಗಳ ನಂತರ ಪೂಜಾರಿ ಪುರೋಹಿತರು ಕೈಎತ್ತರಿಸಿ (ಮುಟ್ಟಿದರೆ ಮೈಲಿಗೆಯಾಗುತ್ತದೆಂಬ ಕರ್ಮಠತನದಿಂದ) ಬಂದ ಭಕ್ತರ ಅಂಗೈಯೊಳಗೆ, ಉಡಿಯೊಳಗೆ ಹಾಕುವ, ಎಸೆಯುವ ಪದಾರ್ಥವಾಗಿತ್ತು. ಅದನ್ನೇ ಮುಗ್ಧರು ಭಕ್ತಿಯಿಂದ ತೀರ್ಥ (ವಿಗ್ರಹತೊಳೆದ, ಅಭಿಷೇಕ ಮಾಡಿದ ನೀರು), ವಿಗ್ರಹದ ಮುಂದೆ ಎಡೆ ಹಿಡಿದು ಅದರಲ್ಲಿ ಒಂದು ಚೂರು ಭಕ್ತರಿಗೆ ಕೊಡುವ ಪ್ರಸಾದ, ಇದನ್ನೆ ತೀರ್ಥ–ಪ್ರಸಾದವೆಂಬ ಭಾವನೆ ಬೇರೂರಿತ್ತು.

ಬಸವಣ್ಣನವರು ಈ ಸಂಕುಚಿತ ಅರ್ಥದ ವೈದಿಕ, ಶೈವಾಚರಣೆಯನ್ನು ನಿರಸನಗೈದು, ಪ್ರತಿಯೊಬ್ಬ ಲಿಂಗಭಕ್ತನು ಸತ್ಯಶುದ್ಧ ಕಾಯಕ ಮಾಡಿ, ಭಕ್ತಿಯಿಂದ ದಾಸೋಹ ಮಾಡಿ, ಸಂತೃಪ್ತಿಯಿಂದ ತನ್ನ ಇಷ್ಟಲಿಂಗಕ್ಕೆ ಅರ್ಪಿಸಿ ಸ್ವೀಕರಿಸುವದೇ **'ಪ್ರಸಾದ'** ವೆಂದರು. ಈ ಪ್ರಸಾದವು ಶುದ್ಧ–ಸಿದ್ಧ–ಪ್ರಸಿದ್ಧವೆಂದು ತ್ರಿವಿಧ ಪ್ರಸಾದವಾಗಿದೆ. ಅರಿವು–ಆಚಾರ–ಅನುಭಾವ (ಗುರು–ಲಿಂಗ–ಜಂಗಮ)ದ ಪ್ರತೀಕವಾಗಿದೆ. ಸತ್ಯ ಶುದ್ಧಕಾಯಕದಿಂದ ಬಂದ ಕಾರೆಯ ಸೊಪ್ಪಾದರೂ ಅದು ಪ್ರಸಾದವೆನಿಸುತ್ತದೆ.

ಕೃಷಿ ಕೃತ್ಯ ಕಾಯಕದಿಂದಾದಡೇನು ?
ತನು ಮನ ಬಳಲಿಸಿ ತಂದು
ದಾಸೋಹವ ಮಾಡುವ ಪರಮ ಸದ್ಭಕ್ತನ
ಪಾದವ ತೋರಯ್ಯ ಎನಗೆ.
ಅದೆಂತೆನೆ: ಆತನ ತನು ಶುದ್ಧ, ಆತನ ಮನ ಶುದ್ಧ
ಆತನ ಭಾವ ಶುದ್ಧ, ಆತನ ನಡೆ ಶುದ್ಧ
ಆತನ ನುಡಿಯೆಲ್ಲಾ ಪಾವನವು....
ಕೂಡಲಸಂಗಮದೇವಾ.

ಇಂತಪ್ಪ ಕಾಯಕ ಜೀವಿಗಳ ಮನೆಯಲ್ಲಿರುವುದು 'ಪ್ರಸಾದ' ಇಂತಹ ಪ್ರಸಾದವನ್ನು ಸ್ವೀಕರಿಸಿದವರ ಜೀವನವೆಲ್ಲ ಪಾವನವಾಗುತ್ತದೆ.

ಈ ರೀತಿಯಾಗಿ ಕಾಯಕದಿಂದ ಗಳಿಕೆ, ದಾಸೋಹದಿಂದ ಬಳಕೆ, ಪ್ರಸಾದದಿಂದ ಸಂತೃಪ್ತಿಯ ಪ್ರಶಾಂತ ಭಕ್ತ ಜೀವನ. ಈ ಮೂರು ತತ್ವ–ಸಿದ್ಧಾಂತಗಳ

ಆದರ್ಶ ಜೀವನವಿರುವ ರಾಜ್ಯವೇ 'ಕಲ್ಯಾಣರಾಜ್ಯ' ವೆನಿಸುತ್ತದೆ. ಇಂದು ದೇಶಕ್ಕೆ ಪ್ರಪಂಚಕ್ಕೆ ಬೇಕಿರುವುದು **ಸಮಭೂಮಿ, ಸಮಪಾಲು, ಸಮಬಾಳು,** ಸಂತೃಪ್ತಿಯ ಬದುಕು ಇರುವ ' ಕಲ್ಯಾಣ ರಾಜ್ಯ'ದ ವ್ಯವಸ್ಥೆ ಬೇಕಿದೆ.

ಅಂತೆಯೇ ಶಿವಯೋಗಿ ಸಿದ್ಧರಾಮೇಶ್ವರರು ಬಸವಣ್ಣನವರ ಸಾಧನೆಯನ್ನು ಕಂಡು ಪರಮಾನಂದಗೊಂಡು ಭಕ್ತಿಯಿಂದ ಸ್ತುತಿಸುತ್ತಾರೆ.

ಅಯ್ಯಾ, ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಯ್ಯಾ !
ನಿಮ್ಮ ಶರಣರ ಮನೆಯೆ ನೆಲೆವನೆ ನೋಡಾ ಎನಗೆ !
ಸಿರಿಯಾಳ ಮನೆಕಟ್ಟಿ, ಬೇರೂರಿಗೆ ಒಕ್ಕಲು ಹೋದ.
ದಾಸಿಮಯ್ಯ ಮನೆಕಟ್ಟಿ, ವ್ಯವಹಾರವನಾಡಿ ಹೋದ.
ಸಿಂಧುಬಲ್ಲಾಳ ಮನೆಕಟ್ಟಿ ಕೈ ಕೂಲಿಗಾರನಾಗಿ ಹೋದ.
ಗಂಗೆ ವಾಳುಕರು ಮನೆಗಟ್ಟಿ
ಲಿಂಗದ ಹೊಲಬನರಿಯದೆ ಹೋದರು.
ಇವರೆಲ್ಲರೂ ಮನೆಯ ಮಾಡಿ, ಮಹವನರಿಯದೆ
ಸಾಲೋಕ್ಯ, ಸಾಮೀಪ್ಯ, ಸಾರೋಪ್ಯ, ಸಾಯುಜ್ಯವೆಂಬ
(ಚತುರ್ವಿಧ ಫಲ) ಪದವಿಗೊಳಗಾದರು.
**ನಮ್ಮ ಸಂಗನಬಸವಣ್ಣ ಬಂದು**
ಕಲ್ಯಾಣದಲ್ಲಿ ಮನೆಯ ಕಟ್ಟದರೆ
ಮರ್ತ್ಯಲೋಕವೆಲ್ಲವೂ ಭಕ್ತಿಸಾಮ್ರಾಜ್ಯವಾಯಿತ್ತು.
ಆ ಮನೆಗೆ ತಲೆಬಾಗಿ ಹೊಕ್ಕುವರೆಲ್ಲರೂ
ನಿಜಲಿಂಗಪದಮಂ ಪಡೆದರು.
ಆ ಗೃಹವ ನೋಡಬೇಕೆಂದು ನಾನು ಹಲವು ಕಾಲ ತಪಸಿದ್ದೆನು.
ಕಪಿಲಸಿದ್ಧ ಮಲ್ಲಿಕಾರ್ಜುನಾ,
ನಿಮ್ಮ ಶರಣ ಸಂಗನಬಸವಣ್ಣನ ಮಹಾಮನೆಗೆ
ನಮೋ ನಮೋ ಎಂದು ಬದುಕಿದೆನು.

ಇಂತಹ ಸರ್ವಾಂಗಸುಂದರ, ಕಾಯಕ ಜೀವಿಗಳ 'ಕಲ್ಯಾಣರಾಜ್ಯವು' ಇಂದು ನಮಗೆಲ್ಲ ಆದರ್ಶವಾಗಬೇಕಿದೆ.

**ಈ) ರಾಜಕೀಯ ಕ್ರಾಂತಿ :**

ಬಸವಪೂರ್ವಯುಗದ ಸಂದರ್ಭದಲ್ಲಿ 'ರಾಜಕೀಯ ಸತ್ತಾ' ಹಾಗೂ 'ಪುರೋಹಿತಶಾಹಿ ಸತ್ತಾ' ವಿಜೃಂಭಿಸುತ್ತಿದ್ದವು. ಇವುಗಳ ಮಧ್ಯದಲ್ಲಿಯೇ ಬಸವಣ್ಣನವರು 'ಪ್ರಜಾಸತ್ತೆ'ಯ ಕುರಿತು ಚಿಂತನೆ ಮಾಡಿ ಪ್ರಜಾಪ್ರಭುತ್ವದ ಬೀಜಗಳನ್ನು

ಬಿತ್ತಿದ್ದಲ್ಲದೆ ಜಗತ್ತಿನ ಮೊಟ್ಟ ಮೊದಲನೆಯ ಪಾರ್ಲಿಮೆಂಟ್ ಎಂದೆನಿಸಿರುವ **'ಅನುಭವ ಮಂಟಪ'** ವನ್ನು ಕ್ರಿ.ಶ.೧೧೪೦ ರಲ್ಲಿ ಸ್ಥಾಪಿಸಿದರೆಂಬುದು ಐತಿಹಾಸಿಕ ಸತ್ಯ ಸಂಗತಿಯಾಗಿದೆ. (ಬ್ರಿಟನ್‌ದ ಪಾರ್ಲಿಮೆಂಟ್ ಕ್ರಿ.ಶ.೧೨೧೫ ರಲ್ಲಿ ಮ್ಯಾಗ್ನಾಕಾರ್ಟ ಐತಿಹಾಸಿಕ ಸಂಗತಿ ಮೂಲಕ ಅನಂತರ ಅಸ್ತಿತ್ವಕ್ಕೆ ಬಂದಿತೆಂದು ಕಾಣುತ್ತೇವೆ).

### i) ಪ್ರಜಾಪ್ರಭುತ್ವದ ಉಗಮ :

ಚಾಲುಕ್ಯ ಸಾಮ್ರಾಜ್ಯದ ಕಲಚೂರ್ಯ ಬಿಜ್ಜಳನ ಪ್ರಧಾನಮಂತ್ರಿಯಾಗಿ ರಾಜಸತ್ತೆಯ ಹಾಗೂ ಪುರೋಹಿತಸತ್ತೆಯ ಕಾಲದಲ್ಲಿ ಬಸವಣ್ಣನವರು ಜನಮಾನಸದಲ್ಲಿ ಸಮತೆ- ಸ್ವಾತಂತ್ರ್ಯ-ಬಂಧುತ್ವ-ಮಾನವೀಯತೆಯ ಪ್ರಜಾಪ್ರಭುತ್ವದ ಚಿಂತನೆಗಳನ್ನು ಹುಟ್ಟು ಹಾಕಿ ಪ್ರಜೆಗಳು ಸ್ವಾವಲಂಬನೆಯ-ಸ್ವಾಭಿಮಾನದ ಬದುಕು ನಡೆಸುವಂತೆ ಮಾಡಿದರು. ಪ್ರಜೆಗಳ ಸಮಸ್ಯೆಗಳ ಪರಿಹಾರಕ್ಕೆ ಶ್ರಮಿಸಿದರು.

ರಾಜಸತ್ತೆ ಹಾಗೂ ಪುರೋಹಿತ ಸತ್ತೆಯ ಕುರಿತು ವಿಡಂಬನೆ ಮಾಡಿದರು-

ಆನೆಯನೇರಿಕೊಂಡು ಹೋದಿರೇ ನೀವು,
ಕುದುರೆಯನೇರಿಕೊಂಡು ಹೋದಿರೇ ನೀವು,
ಕುಂಕುಮ ಕಸ್ತೂರಿಯ ಹೂಸಿಕೊಂಡು ಹೋದಿರೇ ಅಣ್ಣಾ !
ಸತ್ಯದ ನಿಲವನರಿಯದೆ ಹೋದಿರಲ್ಲಾ !
ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ !
ಅಹಂಕಾರವೆಂಬ ಸದಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ !
ನಮ್ಮ ಕೂಡಲಸಂಗಮದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ !

ರಾಜ ಮಹಾರಾಜರು, ಪೂಜಾರಿ-ಪುರೋಹಿತಶಾಹಿಗಳು ತಮ್ಮ ಭೋಗ-ವೈಭವದಲ್ಲಿ ಮೈಮರೆತರೇ ವಿನಃ ಪ್ರಜೆಗಳ ಕಲ್ಯಾಣಕ್ಕಾಗಿ ಯೋಚಿಸಲೂ ಇಲ್ಲ, ಶ್ರಮಿಸಲೂ ಇಲ್ಲ. ಇಂಥವರು ಅಹಂಕಾರವೆಂಬ ಮದವೇರಿದ ಗಜದಂತೆ-ವಿಧಿಗೆ (ಮೃತ್ಯುವಿಗೆ) ಗುರಿಯಾಗಿ ಹೋದರು, ನರಕಕ್ಕೆ ಭಾಜನವಾದರೇ ವಿನಹ ಸತ್ಯದ ನಿಲವನ್ನರಿಯಲಿಲ್ಲ.

ಅಂತೆಯೇ ಬಸವಣ್ಣನವರು 'ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ' ಎಂದು ಪ್ರಜೆಗಳಲ್ಲಿ ಜಾಗೃತಿ ಮೂಡಿಸಿದರು.

## ii) ಪ್ರಧಾನಿಯಾಗಿ ಬಸವಣ್ಣನವರ ಪ್ರತಿಜ್ಞೆ :

ಬಸವಣ್ಣನವರು ಅಂದಿನ ಕಲ್ಯಾಣ ಸಾಮ್ರಾಜ್ಯದ ಪ್ರಧಾನಿಯಾಗಿ, ಅವರು ಮಾಡಿದ ಪ್ರತಿಜ್ಞೆಯು ಇಂದಿಗೂ ಕೂಡ ಪ್ರಪಂಚದ ರಾಜಕೀಯ ನೇತಾರರಿಗೆ ಮಾದರಿಯಾಗಿದೆ.

ಹೊನ್ನಿನೊಳಗೊಂದೊರೆಯ,
ಅನ್ನದೊಳಗೊಂದಗುಳ,
ಸೀರೆಯೊಳಗೊಂದೆಳೆಯ,
ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ,
ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ
ಕೂಡಲಸಂಗಮದೇವಾ.

ರಾಜಕೀಯ ನೇತಾರರು, ಮಂತ್ರಿಗಳು ಸ್ವತಃ ತಾವು ಪ್ರಾಮಾಣಿಕರಾಗಿದ್ದರೆ ಆಡಳಿತವು ಪ್ರಾಮಾಣಿಕವಾಗಿರುತ್ತದೆ. ಒಮ್ಮೆ ಅಧಿಕಾರ ದೊರೆತರೆ ಸಾಕು, ಹತ್ತು ತಲೆಮಾರಿಗಾಗುವಷ್ಟು ಸಂಪತ್ತು ಗಳಿಸಿಡುವ ದುರಾಸೆ ಎಲ್ಲೆಡೆ ತಾಂಡವವಾಡುತ್ತಿದೆ. ಬಸವಣ್ಣನವರು ಶುದ್ಧ ಚಾರಿತ್ರ್ಯದ ಪ್ರಧಾನಿಯಾದುದರಿಂದ ಅವರ ಪ್ರತಿಜ್ಞೆಯಂತೆಯೇ ಅವರ ಜೀವನವಿತ್ತು.

## iii) ಬಸವಣ್ಣನವರ ಪಾರದರ್ಶಕ ಜೀವನ :

ಪ್ರಧಾನಿಯಾಗಿ ಬಸವಣ್ಣನವರ ಜೀವನ ನಡೆ-ನುಡಿ ಒಂದಾದ ಪಾರದರ್ಶಕ ಜೀವನವಾಗಿತ್ತು. ಪ್ರಧಾನಮಂತ್ರಿಯ ಕಾಯಕವು ಜನರ ಸೇವೆಗಾಗಿ ಸಿಕ್ಕಿರುವ ಮಹಾನ್ ಅವಕಾಶವೆಂದು ಅರಿತಿದ್ದರು. ತಮ್ಮ ಅಂತರಂಗದಲ್ಲಿರುವ ಕೂಡಲಸಂಗಮದೇವ ಸಾಕ್ಷಿಯಾಗಿ, ಸರ್ವಪ್ರಜೆಗಳ ಕಲ್ಯಾಣಕ್ಕಾಗಿ ಕಾಯಕ ಮಾಡುತ್ತಿದ್ದರು. ಅಂತೆಯೇ ಬಹಳ ಸ್ಪಷ್ಟವಾಗಿ ಹೇಳುತ್ತಾರೆ-

ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತಾ
ಎನ್ನ ಒಡಲಿಂಗೆ, ಎನ್ನ ಒಡವೆಗೆಂದು
ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ
ಎನ್ನ ಮನಕ್ಕೆ ಮನವೇ ಸಾಕ್ಷಿ !
'ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು
ಓಲೈಸಿಹೆನೆಂದು ನುಡಿವರಯ್ಯಾ,

ಕೊಡುವೆನುತ್ತರವನವರಿಗೆ, ಕೊಡಲಮ್ಮೆ !
ಹೊಲೆ ಹೊಲೆಯರ ಮನೆಯ ಹೊಕ್ಕಾದಡೆಯೂ
ಸಲೆ ಕೈಕೂಲಿಯ ಮಾಡಿಯಾದಡೆಯೂ
ನಿಮ್ಮ ನಿಲವಿಂಗೆ ಕುದಿವೆನಲ್ಲದೆ
ಎನ್ನೊಡಲವಸರಕ್ಕೆ ಕುದಿದೆನಾದಡೆ
ತಲೆದಂಡ, ಕೂಡಲಸಂಗಮದೇವಾ

ಪ್ರಧಾನ ಮಂತ್ರಿಯ ಮಹಾಮನೆಗೆ ಪ್ರಜೆಗಳು ತಮ್ಮ ಕಷ್ಟ-ಕಾರ್ಪಣ್ಯ, ಸುಖ-ದುಃಖ ಹೇಳಿಕೊಳ್ಳಲು ಬರುತ್ತಲೇ ಇರುತ್ತಾರೆ. ದೂರ ದೂರದ ನಾಡು, ಪ್ರಾಂತ, ಮಂಡಲಗಳಿಂದ ಬರುವ ಪ್ರಜೆಗಳು (ಶರಣರು) ಕತ್ತಲಾಯಿತೆಂದು, ರಾತ್ರಿಯಾಗಿದೆಯೆಂದು ಮರಳಿ ಹೋಗುವಂತಾಗಬಾರದು, ತೊಂದರೆ ಅನುಭವಿಸಬಾರದೆಂದು ಯಾವಾಗಲೂ ಮಹಾಮನೆಯ ಮಹಾದ್ವಾರ ಬಾಗಿಲು ತೆರೆದೇ ಇಟ್ಟಿರುತ್ತಿದ್ದರು. ಬಸವಣ್ಣನವರ ಮಹಾಮನೆಯ ಚಿತ್ರಣ ಇಲ್ಲಿದೆ ನೋಡಿ-

ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು
ಬತ್ತಿಯನಿಕ್ಕಿ ಬರವ ಹಾರುತ್ತಿದ್ದೆನೆಲೆಗವ್ವಾ
ತರಗೆಲೆ ಗಿರುಕೆಂದಡೆ ಹೊರಗನಾಲಿಸುವೆ
ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವಾ
ಕೂಡಲಸಂಗಮದೇವನ ಶರಣರು ಬಂದು
ಬಾಗಿಲು ಮುಂದೆ ನಿಂದು 'ಶಿವಾ' ಎಂದಡೆ
ಸಂತೋಷಪಟ್ಟೆನೆಲೆಗವ್ವಾ

'ಕೂಡಲಸಂಗನ ಶರಣರ ಬರವೆನಗೆ ಪ್ರಾಣಜೀವಾಳ' ವೆಂದು, ಶರಣರ ನೋವು ಅದು ಶಿವನ ನೋವು ಎಂದು ಭಾವಿಸಿದ್ದರು. ಶಿವಸ್ವರೂಪಿಗಳಾದ ಪ್ರಜೆಗಳ ಸೇವೆಯೇ ದೇವಪೂಜೆಯೆಂದು, ಕಾಯಕ ನಿಷ್ಠೆ ಮೈಗೂಡಿಸಿಕೊಂಡಿದ್ದರು. 'ನೆಂಟರಿಷ್ಟರು ಬಂದರೆ ಸಮಯವಿಲ್ಲೆನ್ನಿ, ಬಡ ಪ್ರಜೆಗಳು ಬಂದರೆ ಗುಡಿತೋರಣವ ಕಟ್ಟಿ ತನ್ನಿರಿ ಎಂಬ ಧ್ಯೇಯ ಅವರದಾಗಿತ್ತು.

### iv) ಭ್ರಷ್ಟಾಚಾರ ನಿರ್ಮೂಲನೆ :

ರಾಜ್ಯಾಡಳಿತದಲ್ಲಿ ಭ್ರಷ್ಟಾಚಾರ ನಿರ್ಮೂಲನೆಯಾಗಬೇಕಾದರೆ, ಮೊದಲಿಗೆ ಪ್ರಧಾನಿ ಹಾಗು ಅವರ ಮಂತ್ರಿಗಳು, ಸರ್ಕಾರದ ಅಧಿಕಾರಿಗಳು ಪ್ರಾಮಾಣಿಕರಾಗಿರಬೇಕು. 'ಲಂಚ ವಂಚನೆಗೆ ಕೈಯಾನದ ಭಾಷೆ' ಎಂಬ ದೃಢ ನಿರ್ಧಾರ ಮಾಡಿರಬೇಕು. ಪ್ರಧಾನಿಯಾಗಿ ಬಸವಣ್ಣನವರು ಎಂತಹ ಪ್ರಾಮಾಣಿಕ ಜೀವನ ನಡೆಸಿದ್ದರೆಂಬುದು ಕಾಣುತ್ತೇವೆ.

ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು
ಓರೆಯಾವಿನ ಬೆನ್ನ ಹರಿಯಲೇಕಯ್ಯಾ?
ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ?
ಕೂಡಲಸಂಗಮದೇವನುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯಾ ?

ಕಾಯಕದಿಂದ ಬರುವ ಪ್ರತಿಫಲವೇ 'ಹಾಲಹಳ್ಳ' ವಿದ್ದಂತೆ, ಹೀಗಿರುವಾಗ ಲಂಚದಾಸೆಗೆ ಕೈಯೊಡ್ಡುವದೆಂದರೆ ಒದೆಯುವ ಆಕಳ ಬೆನ್ನುಹತ್ತಿ ಇಲ್ಲದ ಹಾಲಿಗಾಗಿ ತಿರುಗಿದಂತೆಯೇ ಸರಿ, ಇಂತಹ ಲಜ್ಜೆಗೇಡು, ಮಾನಗೇಡು ಭ್ರಷ್ಟತನಕ್ಕೆ ಕೈಹಾಕಲೇಕೆ? ಎಂದು ಕೇಳುತ್ತಾರೆ. **ರಾಜಭಂಡಾರ ಅದು ಪ್ರಜೆಗಳ ಸಂಪತ್ತು,** ಅದರ ರಕ್ಷಣೆ ಮತ್ತು ಸದುಪಯೋಗ ಪ್ರಜೆಗಳ ಕಲ್ಯಾಣಕ್ಕೆ ಮಾತ್ರ ಬಳಸಬೇಕು ಎಂಬ ಸಂದೇಶ ಇಲ್ಲಿದೆ.

ಹಸಿದು ಎಕ್ಕೆಯ ಕಾಯ ಮೆಲಬಹುದೆ ?
ನೀರಡಿಸಿ ವಿಷವ ಕುಡಿಯಬಹುದೆ ?
ಸುಣ್ಣದ, ತುಯ್ಯಲದ ಬಣ್ಣವೊಂದೇ ಎಂದಡೆ
ನಂಟುತನಕ್ಕೆ ಉಣಬಹುದೆ ?
ಲಿಂಗಸಾರಾಯ ಸಜ್ಜನರಲ್ಲದವರ
ಕೂಡಲಸಂಗಮದೇವನೆಂತೊಲಿವ ?

'ಹಸಿವಾಗಿದೆಯೆಂದು ಎಕ್ಕೆಯ ಕಾಯ ತಿಂದರೆ, ನೀರಡಿಕೆಯಾಗಿದೆ ಯೆಂದು ವಿಷವ ಕುಡಿದರೆ, ಸುಣ್ಣದ ನೀರು ಹಾಗೂ ಹಾಲಿನ ಬಣ್ಣವು ಬೆಳ್ಳಗೆ ಒಂದೇ ಎಂದು ನಂಟುತನಕ್ಕೆ ಸುಣ್ಣದ ನೀರು ಉಂಡರೆ ಸಾವು ನಿಶ್ಚಿತ. ಅದೇರೀತಿಯಾಗಿ ಕಾಯಕದ ಸಂಬಳ (ಹಣ) ಮತ್ತು ಲಂಚದ ಗಿಂಬಳ(ಹಣ) ಎರಡೂ ಒಂದೇ ಎಂದು ಭಾವಿಸಿ, ಲಂಚ ಸ್ವೀಕರಿಸಿದರೆ ಅನಾಹುತ ತಪ್ಪದು ! ಭ್ರಷ್ಟಾಚಾರದ ದುರ್ಜನರಿಗೆ ದೇವರೊಲಿಯಲಾರ ಎಂದು ತಿಳಿಹೇಳುತ್ತಾರೆ.

ಬಸವಣ್ಣನವರ ಕಲ್ಯಾಣ ರಾಜ್ಯದ ಧ್ಯೇಯವೆಂದರೆ ವ್ಯಕ್ತಿಯ ಅಂತರಂಗ ಶುದ್ಧಿ ಬಹಿರಂಗ ಶುದ್ಧಿಯಾಗಿತ್ತು. ಅಂತೆಯೇ ಸಪ್ತಶೀಲಗಳನ್ನು ಅಳವಡಿಸಿಕೊಳ್ಳಲು ಹೇಳಿದ್ದಾರೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,
ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,
ಇದೆ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ.

ಈ ಸಪ್ತಶೀಲಗಳು ಅನುಷ್ಠಾನಕ್ಕೆ ಬಂದರೆ, ವ್ಯಕ್ತಿ–ಸಮಾಜ, ವ್ಯಷ್ಟಿ–ಸಮಷ್ಟಿಯ ಕಲ್ಯಾಣವಾಗುತ್ತದೆ. ನಿಜಾರ್ಥದಲ್ಲಿ ಅದುವೇ 'ಕಲ್ಯಾಣರಾಜ್ಯ'ವಾಗುತ್ತದೆ.

### v) ದೇವದಾಸಿ ಪದ್ಧತಿ–ವೇಶ್ಯಾಪದ್ಧತಿ ನಿರ್ಮೂಲನೆ :

ಬಸವಪೂರ್ವದ ಸಮಾಜದಲ್ಲಿ ಧಾರ್ಮಿಕ ಹಾಗೂ ರಾಜಕೀಯ ರಂಗಗಳ ಪಟ್ಟಭದ್ರರು ಶೂದ್ರಾತಿ–ಶೂದ್ರ ದಲಿತ ಜನಾಂಗದ ಸ್ತ್ರೀಯರನ್ನು ದೇವತೆಗಳ ಹೆಸರಿನಲ್ಲಿ ದೇವಾಲಯಗಳಲ್ಲಿ ದೇವದಾಸಿಯನ್ನಾಗಿಸಿ ಮುತ್ತುಕಟ್ಟಿಸುವ ಮೂಲಕ, ಬಸವಿಪದ್ಧತಿ–ದೇವದಾಸಿಪದ್ಧತಿಗೆ ಅರ್ಪಿಸಿಕೊಳ್ಳುವಂತೆ ಮಾಡಿದ್ದರು. ಇದರಿಂದ ನಿರಂತರವಾಗಿ ತಮ್ಮ ವಿಲಾಸಿ–ಭೋಗಕ್ಕೆ ಅಂದರೆ ರಂಗಭೋಗ–ಅಂಗಭೋಗಕ್ಕೆ ಬಳಸಿಕೊಳ್ಳುತ್ತಿದ್ದರು. ಅದೇ ರೀತಿಯಾಗಿ ಪಟ್ಟಣದ ಕೆಲವು ಭಾಗಗಳಲ್ಲಿ ವೇಶ್ಯಾವಾಟಿಕೆಗಳನ್ನು ನಿರ್ಮಿಸಿ, ಅಲ್ಲಿ ಸವರ್ಣೀಯರು, ಅಧಿಕಾರಿ ವರ್ಗದವರು ಸ್ತ್ರೀಯರನ್ನು ವೇಶ್ಯೆಯರನ್ನಾಗಿಸಿ ನಿರಂತರ ಶೋಷಿಸುತ್ತಿದ್ದರು. ರಾಜಧಾನಿ ಕಲ್ಯಾಣ ಮಹಾನಗರದಲ್ಲಿ ಹನ್ನೆರಡು ಸಾವಿರ **'ಪಣ್ಯಾಂಗನೆಯರು'** ಅಂದರೆ ವೇಶ್ಯೆಯರು (ಸೂಳೆಯರು) ಇದ್ದರೆಂದು ತಿಳಿದುಬರುತ್ತದೆ.

ದಲಿತ ಮಹಿಳೆಯರ ಮೇಲಿನ ಇಂತಹ ನಿರಂತರ ಶೋಷಣೆಯನ್ನು ತೊಡೆದು ಹಾಕಲು ಬಸವಣ್ಣನವರು ಕಾನೂನು ಮೂಲಕ, ಅವರಿಗೆ ಅರಿವು ಮೂಡಿಸಿ, ಪುನರ್ವಸತಿ ಕಾಯಕ ಕೇಂದ್ರಗಳನ್ನು ಸ್ಥಾಪಿಸಿ ಅವರಿಗೆ ದಾಸೋಹ ಭವನದಲ್ಲಿ ಸಹಭೋಜನ ವ್ಯವಸ್ಥೆ ಮಾಡಿದರು. ಮದುವೆಯಾಗಲು ಬಯಸುವವರಿಗೆಲ್ಲ ಯೋಗ್ಯ ಕಾಯಕ ಜೀವಿ ಯುವಕರೊಂದಿಗೆ ಕಲ್ಯಾಣ ಮಹೋತ್ಸವ ಜರುಗಿಸಿದರು. **'ಕಲ್ಯಾಣ ಪಟ್ಟಣದ ಪಣ್ಯಾಂಗನೆಯರನೆಲ್ಲ ಪುಣ್ಯಾಂಗನೆಯರನ್ನಾಗಿಸಿದಾತ ಬಸವಣ್ಣ'** ಎಂದು ಕವಿಗಳು ದಾಖಲಿಸಿದ್ದಾರೆ.

ಸ್ವತ : ಬಸವಣ್ಣನವರು ತಮ್ಮ ವಚನವೊಂದರಲ್ಲಿ–

ದಾಸಿಪುತ್ರನಾಗಲಿ, ವೇಶ್ಯಾಪುತ್ರನಾಗಲಿ
ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು
ವಂದಿಸಿ ಪೂಜಿಸಿ ಪಾದೋದಕ ಪ್ರಸಾದವ
ಕೊಂಬುವುದೇ ಯೋಗ್ಯ.
ಹೀಂಗಲ್ಲದೆ ಉದಾಸೀನವ ಮಾಡಿ ಬಿಡುವವರಿಗೆ
ಪಂಚಮಹಾಪಾತಕ ನರಕ ಕಾಣಾ
ಕೂಡಲಸಂಗಮದೇವಾ.

ಎಂದು ಹೇಳಿದ್ದಾರೆ. ದೇವದಾಸಿಯರ, ವೇಶ್ಯೆಯರ ಮಕ್ಕಳು **'ಶನಿಸಂತಾನ'**ವೆಂದು ಕರೆಯಿಸಿಕೊಳ್ಳುತ್ತಿದ್ದುದನ್ನು ತೊಡೆದು ಹಾಕಿ, ಅವರಿಗೆ ಧರ್ಮಸಂಸ್ಕಾರವಿತ್ತು

'ಶರಣಸಂತಾನ'ವೆಂದು ಕರೆದರು. ಅಂಥವರ ಬಾಳಿಗೆ ಬೆಳಕು ತೋರಿದರು. ಇದು ಬಸವಣ್ಣನವರ ರಾಜಕೀಯ ಮುತ್ಸದ್ದಿತನದ ದ್ಯೋತಕವಾಗಿದೆ.

ಇಂತಹ ವೇಶ್ಯಾವೃತ್ತಿಯ ಸ್ತ್ರೀ'ಸೂಳೆ ಸಂಕವ್ವೆ' ಯು ಧರ್ಮಸಂಸ್ಕಾರ ಹೊಂದಿ, ಶಿವಶರಣೆಯಾಗಿ ವಚನರಚನೆ ಮಾಡಿರುವುದನ್ನು ಕಾಣುತ್ತೇವೆ.

ಸವರ್ಣೀಯರಿಗೆ 'ಛಲಬೇಕು, ಪರಸತಿಯನೊಲ್ಲೆನೆಂಬ' ಎಂಬ ಕಟ್ಟಳೆಯನ್ನು ಜಾರಿಗೆತಂದರು. ಈ ರೀತಿಯ 'ಸರ್ವಜನ ಹಿತಾಯ ಸರ್ವಜನ ಸುಖಾಯ' ಎಂಬ ಕಲ್ಯಾಣ ರಾಜ್ಯದ ನಿರ್ಮಾಣ ಮಾಡಿದರು.

## ೭. ಬಸವಣ್ಣನವರ ಜೀವನದ ಘಟನೆಗಳು :

ಬಸವಣ್ಣನವರು ಕಲ್ಯಾಣಕ್ಕೆ ಬಂದು ಅಖಂಡ ೩೬ ವರುಷಗಳ ಕಾಲ ಬಿಜ್ಜಳನ ರಾಜ್ಯಕೋಶದ ಭಂಡಾರಿಯಾಗಿ, ಅರ್ಥಸಚಿವರಾಗಿ, ಹಿರಿಯ ದಂಡನಾಯಕರಾಗಿ, **ಪ್ರಧಾನಿಯಾಗಿ** ಕಾರ್ಯಭಾರ ನಿರ್ವಹಿಸುತ್ತಲೇ, ಸಮಾಜೋ ಧಾರ್ಮಿಕವಾಗಿ ಜಾತಿರಹಿತ ಸಮಾಜ ನಿರ್ಮಾಣ, ಅಸ್ಪೃಶ್ಯತಾ ನಿವಾರಣೆ, ಜಡಸ್ಥಾವರಕ್ಕಿಂತ ಚೈತನ್ಯ ಮಾನವ (ಜಂಗಮ)ಸೇವೆ ಸಕಲ ಪ್ರಾಣಿಗಳ ಕಲ್ಯಾಣಕ್ಕಾಗಿ ಕೇವಲ ಮಾತನಾಡದೇ ಸ್ವತಃ ತಾವೇ ಆಚರಣೆಯ ಮೂಲಕ ಬದಲಾವಣೆ ತಂದರು. ಉಚ್ಚ ಕುಲದವರಲ್ಲಿದ್ದ ಮೇಲರಿಮೆ ನಿರಸನಗೈಯುತ್ತ ಕೀಳು ಕುಲದವರೆಂದು ಭಾವಿಸಿದವರಲ್ಲಿದ್ದ ಕೀಳರಿಮೆ ದೂರ ಮಾಡಿ, ಎಲ್ಲರನ್ನೂ ನಮ್ಮವರೆಂದು ಅಪ್ಪಿಕೊಂಡು ಸಮಾನತೆಯನ್ನು ಆಚರಿಸಿ ತೋರಿದರು.ಅವರ ಈ ಸಾಧನೆಯ ದಾರಿಯಲ್ಲಿ ನಡೆದ ಕೆಲವು ಘಟನೆಗಳು ಅವರ ಮಾತೃ ಹೃದಯ ವಿಶ್ವಬಂಧುತ್ವ- ವಿಶ್ವಮಾನವೀಯತೆಯ ದ್ಯೋತಕಗಳಾಗಿವೆಯೆಂಬುದನ್ನು ನೋಡಬಹುದಾಗಿದೆ.

### i) ಮಾದಾರ ಚೆನ್ನಯ್ಯನ ಮನೆಯಲ್ಲಿ ಅಂಬಲಿ ಸವಿದದ್ದು :

ಚಾಲುಕ್ಯ ಸಾಮ್ರಾಜ್ಯದ ಆಡಳಿತಕ್ಕೊಳಪಟ್ಟಿದ್ದ ಕಂಚಿಪಟ್ಟಣದ ರಾಜ ಕರಿಕಾಲಚೋಳನ ಅಶ್ವಾಲಯದಲ್ಲಿ ಹುಲ್ಲು ಕೊಯ್ದು ತಂದು-ಕುದುರೆಗಳಿಗೆ ಆಹಾರ ಒದಗಿಸುವ ಉದ್ಯೋಗ ಮಾಡುತ್ತಿದ್ದ ಶಿವಭಕ್ತ ಚೆನ್ನಯ್ಯನು ಗುಪ್ತ ಭಕ್ತಿಯ ಶರಣನಾಗಿದ್ದನು. ಈ ಉದ್ಯೋಗಕ್ಕೆ ಪ್ರತಿಫಲವಾಗಿ ಸಿಗುತ್ತಿದ್ದ ದವಸ ಧಾನ್ಯಗಳನ್ನು ತನ್ನ ಗುಡಿಸಲಿಗೆ ತಂದು ಮಡದಿ ಗಂಗಾದೇವಿಗೆ ನೀಡುತ್ತಿದ್ದರು. ಅವಳು ಶಿವಧ್ಯಾನ ಗೈಯುತ್ತಾ 'ಅಂಬಲಿ' ಸಿದ್ಧಪಡಿಸುತ್ತಿದ್ದಳು. ಅದನ್ನೇ ಜಗುಲಿ ಮೇಲಿನ ಶಿವಲಿಂಗಕ್ಕೆ ನೈವೇದ್ಯ ಮಾಡಿ ಶಿವಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಆ ನಾಡಿನ ದೊರೆ ಕಲಿಕಾಳಚೋಳನೂ ಸಹ ಶಿವಭಕ್ತನಾದ್ದರಿಂದ ಆತನೂ ಪ್ರತಿದಿನ ಕಂಚಿ ಪಟ್ಟಣದ ಶಿವದೇವಾಲಯಕ್ಕೆ ಹೋಗಿ ಪಂಚ-ಪಕ್ವಾನ್ನಗಳ ನೈವೇದ್ಯ ಅರ್ಪಿಸಿ ಪೂಜೆ ಮಾಡಿಸಿ ಬರುತ್ತಿದ್ದನು. ಒಂದು ಸಲ ದೇವಾಲಯದಲ್ಲಿ ಶಿವನ ಅಶರೀರವಾಣಿ ಆಯಿತಂತೆ!

ಚೆನ್ನಯ್ಯನ ಅಂಬಲಿ ಸ್ವೀಕರಿಸಿದ್ದೇನೆ, ಹೊಟ್ಟೆ ತುಂಬಿದೆ, ನಿನ್ನ ನೈವೇದ್ಯಕ್ಕೆ ಸ್ಥಳವಿಲ್ಲವೆಂದು, ರಾಜ ಬೆರಗಾಗಿ ಚೆನ್ನಯ್ಯನ ಗುಡಿಸಲಿಗೆ ಬಂದು, ಭಕ್ತಿಯಿಂದ ತಲೆಬಾಗಿ ಆತನನ್ನ ಅಂಬಾರಿಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿದ. ಗುಪ್ತಭಕ್ತಿಯ ಚೆನ್ನಯ್ಯ–ಗಂಗಾದೇವಿಯರು ಕಲ್ಯಾಣದ ಚರಜಂಗಮರಿಂದ ಕಲ್ಯಾಣದ ಕೀರ್ತಿವಾರ್ತೆಯ ಕೇಳಿ, ಕಾಂಚಿಪಟ್ಟಣದಿಂದ ಕಲ್ಯಾಣಕ್ಕೆ ಬಂದು ನೆಲೆಸಿದರು. ಚಮ್ಮಾವುಗೆ ಹೊಲಿಯುವ ಕಾಯಕ ಕೈಕೊಂಡರು. ಇಷ್ಟಲಿಂಗಧಾರಿಗಳಾಗಿ ಹಿರಿಯ ಶಿವಶರಣರಾದರು, ವಚನಕಾರರಾದರು.

ಶರಣ ಚೆನ್ನಯ್ಯನವರ ಕುಟೀರಕ್ಕೆ ಬಸವಣ್ಣನವರು ಹೋಗಿ, ಅವರ ಅನುಭಾವ ಆಲಿಸಿ, ಅವರ ಮನೆಯಲ್ಲಿಯ 'ಅಂಬಲಿ ಪ್ರಸಾದ' ಎಡೆಮಾಡಲು ಕೇಳಿದರು. ಚೆನ್ನಯ್ಯ ಶರಣರು ಸಂಕೋಚದಿಂದ ಎಡೆಬಟ್ಟಲ ಮೇಲೆ ಕೈ ಅಡ್ಡಹಿಡಿದರು. ಆಗ ಬಸವಣ್ಣನವರು ತಮ್ಮ ಅಂಗದ ಮೇಲಿನ ಇಷ್ಟಲಿಂಗ ತೋರಿಸಿ, ನಮ್ಮ ಕೂಡಲಸಂಗಮದೇವಂಗೆ ಬೇಕೆಂದು ಬೇಡಿದಾಗ, ಕೈತೆಗೆದು ಅಂಬಲಿ ಪ್ರಸಾದ ನೀಡಿದರು. ಬಸವಣ್ಣನವರು ಚೆನ್ನಯ್ಯನ ಪ್ರಸಾದ ಸ್ವೀಕರಿಸಿದರು, ಚೆನ್ನಯ್ಯನವರನ್ನು ಸ್ತುತಿಸಿದರು.

ನಡೆ ಚೆನ್ನ, ನುಡಿ ಚೆನ್ನ,
ಎಲ್ಲಿ ನೋಡಿದಡಲ್ಲಿ ಚೆನ್ನ
ಸವಿದು ನೋಡಿ ಅಂಬಲಿ
ರುಚಿಯಾಯಿತ್ತೆಂದು
ಕೂಡಲಸಂಗಮದೇವಂಗೆ ಬೇಕೆಂದು
ಕೈದೆಗೆದ ನಮ್ಮ ಚೆನ್ನ.

ಹೀಗೆ ಬಸವಣ್ಣನವರು ಹೃದಯದ ಕಳಕಳಿಯಿಂದ ದಲಿತ–ಪಂಚಮವರ್ಣಿಯ ಶರಣ ಮಾದಾರ ಚೆನ್ನಯ್ಯನ ಗುಡಿಸಲಲ್ಲಿ ಅಂಬಲಿ ಪ್ರಸಾದ ಸ್ವೀಕರಿಸಿ, ಅವರ ಕೀಳರಿಮೆ ನಿರಸನಗೈದು, ತಮ್ಮ ಮೇಲರಿಮೆ ನಿರಸನ ಮಾಡಿಕೊಂಡು ಸಮಾನತೆಯನ್ನು ಪ್ರಾಮಾಣಿಕವಾಗಿ ಆಚರಿಸುತ್ತಿದ್ದರು.

### ii) ಸಂಬೋಳಿ ನಾಗಿದೇವನ ಮನೆಯಲ್ಲಿ ಪ್ರಸಾದ ಸ್ವೀಕರಿಸಿದ್ದು :

ಬಸವಣ್ಣನವರು ಇನ್ನೋರ್ವ ದಲಿತ ಶಿವಶರಣ ಸಂಬೋಳಿ ನಾಗಿದೇವನ ಮನೆಗೆ ಹೋಗಿ, ಅಲ್ಲಿ ಶಿವಾನುಭವ ಮಾಡಿ, ಆ ಶರಣನ ಮನೆಯಲ್ಲಿ ಪ್ರಸಾದ ಸ್ವೀಕರಿಸಿದರು. ಅಂದಿನ ಕಾಲದಲ್ಲಿ ನಾಗಿದೇವನನ್ನು ಅಸ್ಪೃಶ್ಯ, ಹೊಲೆಯ ಜನಾಂಗದವನೆಂದು ಸವರ್ಣಿಯ ಜಾತಿವಾದಿಗಳು ಕರೆಯುತ್ತಿದ್ದರು. ಬಸವಣ್ಣನವರು ಅಸ್ಪೃಶ್ಯ–ಪಂಚಮವರ್ಣಿಯರನ್ನು ಹಿರಿಯ ಮಾಹೇಶ್ವರರೆಂದು ಗೌರವಿಸಿ,

ಅವರೆಲ್ಲರಿಗೂ ಶಿವದೀಕ್ಷೆಯನ್ನಿತ್ತು. (ಇಷ್ಟಲಿಂಗ ಸಂಸ್ಕಾರ) ಶರಣರನ್ನಾಗಿಸಿದ್ದರು. ತಾವೂ ಅವರ ಮನೆ, ಗುಡಿಸಲುಗಳಿಗೆ ಹೋಗಿ ಪ್ರಸಾದ ಮಾಡುತ್ತಿದ್ದರು, ಅವರನ್ನೂ ತಮ್ಮ ಮಹಾಮನೆಗೆ ಕರೆದುಕೊಂಡು ಬಂದು ಸಹಭೋಜನ ಮಾಡುತ್ತಿದ್ದರು.

ಸಂಭೋಳಿ ನಾಗಿದೇವನ ಮನೆಯಲ್ಲಿ ಬಸವಣ್ಣನವರು ಪ್ರಸಾದ ಸ್ವೀಕರಿಸಿದ್ದನ್ನು ಅರಿತುಕೊಂಡ ಸಂಪ್ರದಾಯವಾದಿಗಳು ಬಿಜ್ಜಳ ಭೂಪಾಲನಲ್ಲಿ– ವರ್ಣಾಶ್ರಮ ಧರ್ಮವು ನಾಶವಾಯಿತೆಂದು, ಬಸವಣ್ಣನವರು ಪ್ರಧಾನಿಯಾಗಿ ವರ್ಣಸಂಕರ ಮಾಡುತ್ತಿದ್ದಾರೆಂದು ದೂರು ಕೊಟ್ಟರು. ಬಿಜ್ಜಳನು ಆಸ್ಥಾನದ ಹೊರಗೆ ಅಂಗಳದಲ್ಲಿ ನ್ಯಾಯ ಸಭೆ ನಡೆಸಿ– ಬಸವಣ್ಣನವರಿಗೆ ಸ್ಪಷ್ಟೀಕರಣ ಕೇಳಿದನು. ಬಸವಣ್ಣನವರು **ಶಿವಭಕ್ತರದು ಒಂದೇ ಕುಲ.** ನಾವು ಜಾತಿ–ವಿಜಾತಿ ಒಪ್ಪುವದಿಲ್ಲ. ನಾನೇನು ಭವಿಗಳ ಮನೆಯಲ್ಲಿ ಊಟ ಮಾಡಿಲ್ಲ, ಭಕ್ತ ನಾಗಿದೇವರ ಮನೆಯಲ್ಲಿ ಪ್ರಸಾದ ಮಾಡಿದ್ದೇನೆ. ಎಂದು ಉತ್ತರಿಸಿದರು. (ಬಿಜ್ಜಳನ ಪರೀಕ್ಷೆಯಲ್ಲಿ ನಾಗಿದೇವನ ಬೆರಳಿಂದ ಹಾಲು ಮತ್ತು ಜಾತಿವಾದಿ ಕುಲಜನ ಬೆರಳಿನಿಂದ ಕೀವು–ರಕ್ತ ಸುರಿಯಿತೆಂದು ಕಥಾನಕವಿದೆ).

ಕಾಯಕ ಮಾಡಿ ಪ್ರಸಾದ ಸ್ವೀಕರಿಸುವ ಶರಣನ ಮನೆಯಲ್ಲಿಯದು ಅಮೃತ, ಕಾಯಕ ಮಾಡದೇ ಕೂಳು ತಿನ್ನುವವನ ಮನೆಯಲ್ಲಿಯದು ವಿಷ, ಎಂಬುದು ಈ ಕಥಾನಕದ ತಾತ್ಪರ್ಯವಾಗಿದೆ.

ಬಸವಣ್ಣನವರು ಮೇಲ್ಜಾತಿಯ ಸಂಪ್ರದಾಯವಾದಿಗಳಿಗೆ ನಿಷ್ಠುರವಾಗಿ ಹೇಳುತ್ತಾರೆ–

ಹೊಲೆಯೊಳಗೆ ಹುಟ್ಟಿ ಕುಲವನರಸುವೆ ಎಲವೋ
ಮಾತಂಗಿಯ ಮಗ ನೀನು!
ಸತ್ತುದನೆಳೆವ ಅದೆತ್ತಣ ಹೊಲೆಯ ?
ಹೊತ್ತು ತಂದು ನೀವು ಕೊಲುವಿರಿ
ಶಾಸ್ತ್ರವೆಂಬುದು ಹೋತಿಂಗೆ ಮಾರಿ
ವೇದವೆಂಬುದು ನಿಮಗೆ ತಿಳಿಯದು.
ನಮ್ಮ ಕೂಡಲಸಂಗನ ಶರಣರು
ಕರ್ಮವಿರಹಿತರು, ಶರಣ ಸನ್ನಿಹಿತರು
ಅನುಪಮ ಚಾರಿತ್ರ್ಯರು
ಅವರಿಗೆ ತೋರಲು ಪ್ರತಿಯಿಲ್ಲವೋ.

ಈ ರೀತಿಯಾಗಿ ದಲಿತ–ಶೂದ್ರ–ಅಸ್ಪೃಶ್ಯರನ್ನು ಹೃದಯಾರೆ ಅಪ್ಪಿಕೊಂಡು ತಮ್ಮ ಮೇಲ್ಜಾತಿಯ ಹುಟ್ಟಿನ ಕುಲ ಭ್ರಮೆ ಕಳೆದುಕೊಂಡವರು ಬಸವಣ್ಣನವರು.

## iii) ಅಸ್ಪೃಶ್ಯ–ವೃದ್ಧರೋಗಿಯ ಸೇವೆ ಮಾಡಿದ್ದು :

ಒಂದು ದಿನ ಪ್ರಧಾನಿ ಬಸವಣ್ಣನವರು ಅರಮನೆಯ ಆಸ್ಥಾನದ ಸಭೆ ಮುಗಿದ ನಂತರ ಕಲ್ಯಾಣದ ಮಹಾಬೀದಿಯಲ್ಲಿ ಆಶ್ವಾರೂಢರಾಗಿ ಬರುತ್ತಿರುವಾಗ, ಅಲ್ಲೊಂದು ದೇವಾಲಯದ ಮುಂದೆ, ಅಲ್ಲಿಯ ಪೂಜಾರಿಗಳು ಕೋಲಿನಿಂದ ವಯಸ್ಸಾದ ಹಣ್ಣು ಹಣ್ಣಾದ ಮುದುಕನನ್ನು ದೂಡುತ್ತಿದ್ದದನ್ನು ನೋಡಿದರು. ಕುದುರೆಯಿಂದ ಇಳಿದು ಹೋಗಿ ನೋಡಲು ಆತನು ವೃದ್ಧರೋಗಿಯಾಗಿದ್ದ. ಕೈ–ಕಾಲು, ಹಣೆ–ಮುಖದಿಂದ ರಕ್ತ ಸೋರುತ್ತಿತ್ತು. ಪ್ರಧಾನಮಂತ್ರಿ ಬಸವಣ್ಣನವರನ್ನು ಕಂಡು ಪೂಜಾರಿಗಳು ಥರ ಥರ ನಡುಗ ತೊಡಗಿದರು. ಆ ಮುದುಕನು ಅಸ್ಪೃಶ್ಯ ಜನಾಂಗದನಾಗಿದ್ದು, ವಯೋವೃದ್ಧ ರೋಗಿಯಾಗಿದ್ದನು. ಮಧ್ಯಾಹ್ನದ ಬಿಸಿಲಿನಲ್ಲಿ ಜ್ವರದ ತಾಪದಿಂದ ಬಾಯಾರಿ–ಕುಡಿಯಲು ನೀರು ಕೇಳಿದ್ದಕ್ಕೆ, ದೇವಾಲಯದಲ್ಲಿ ಶಿವಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದ ಪೂಜಾರಿಗಳು ಅಸ್ಪೃಶ್ಯನು ದೇವಾಲಯದ ಮೆಟ್ಟಿಲು ಮುಟ್ಟಿದರೆ ಮೈಲಿಗೆಯಾಗುತ್ತದೆಂದು ಕೋಪದಿಂದ ಕೋಲಿನಿಂದ ದೂರ ದೂಡಿದ್ದರಿಂದ ಆತ ಉರುಳಿ ಬಿದ್ದಿದ್ದನು. ಈ ವಿಷಯವನ್ನು ವೃದ್ಧನಿಂದ ಕೇಳಿ ತಿಳಿದ ಬಸವಣ್ಣವರು ಈ ಅಜ್ಜನಿಗಾದ ನೋವನ್ನು ಕಂಡು ಮಮ್ಮಲ ಮರುಗಿದರು. ತಕ್ಷಣವೇ ಕ್ರೋಧದಿಂದ ಪೂಜಾರಿಗಳನ್ನು ಕುರಿತು ಹೇಳಿದರು–

ಎರೆದಡೆ ನೆನೆಯದು, ಬಿಟ್ಟರೆ ಬಾಡದು
ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ
ಕೂಡಲಸಂಗಮದೇವಾ
ಜಂಗಮಕ್ಕೆರೆದಡೆ ಸ್ಥಾವರ ನೆನೆಯಿತ್ತು.

ಜೀವ ಚೈತನ್ಯವಿರುವ ಜಂಗಮ ಈ ವೃದ್ಧರೋಗಿಯು, ಇವರ ಬಾಯಾರಿಕೆಗೆ ಒಂದು ಗುಟುಕು ನೀರು ಕೊಟ್ಟಿದ್ದರೆ ನೀವು ಪೂಜಿಸುವ ಸ್ಥಾವರಲಿಂಗ ನನೆಯುತ್ತಿತ್ತು. ಇದನ್ನು ಮರೆತು ಜಡವಾದ ಶಿಲೆಗೆ ದೇವರೆಂದು ಎಷ್ಟೇ ನೀರು ಎರೆದು ಅಭೀಷೇಕ ಮಾಡಿದರೂ ಅದು ನನೆಯುವದಿಲ್ಲ, ಜೀವಿಗಳಲ್ಲಿ ಶಿವನಿದ್ದಾನೆಯೇ ಹೊರತು ಜಡದಲ್ಲಿ ಶಿವನಿಲ್ಲ ಎಂಬುದನ್ನು ತಿಳಿಸಿ ಹೇಳಿದರು. ತಮ್ಮ ಕಾವಲು ಭಟರಿಗೆ ಹೇಳಿ, ಕುದುರೆ ತರಿಸಿ, ಆ ವೃದ್ಧನನ್ನು ಮಹಾಮನೆಗೆ ಕರೆದೊಯ್ದು, ಸ್ನಾನಮಾಡಿಸಿ, ವೈದ್ಯ ಸಂಗಣ್ಣ ಶರಣರನ್ನು ಕರೆಯಿಸಿ ಔಷಧೋಪಚಾರ ಮಾಡಿಸಿದರು. ಆ ಅಸ್ಪೃಶ್ಯ ವೃದ್ಧನನ್ನು ಜಂಗಮಲಿಂಗವೆಂದು ಆರೈಕೆ ಮಾಡಿ, ಪ್ರಸಾದ ಮಾಡಿಸಿ ಆತನನ್ನು ಕೇರಿಯ ಗುಡಿಸಲಿಗೆ ತಲುಪಿಸಿದರು. ಹೀಗೆ ಅಸ್ಪೃಶ್ಯರಲ್ಲಿ ದೇವರನ್ನು ಕಂಡ ಮಾನವತಾವಾದಿ ಬಸವಣ್ಣನವರು.

## iv) ಕಳ್ಳಭದ್ರನ- ಹೃದಯ ಪರಿವರ್ತನೆಗೊಂಡು ಶರಣನಾದದ್ದು :

ಒಂದು ದಿನ ರಾತ್ರಿ ಬಸವಣ್ಣನವರು ತಮ್ಮ ಮಹಾಮನೆಯಲ್ಲಿ ತಮ್ಮ ಮಲಗುವ ಕೋಣೆಯಲ್ಲಿ ನಿದ್ರಿಸುತ್ತಿರುವಾಗ, ಶರಣ ವೇಷಧಾರಿಯಾಗಿ ಒಬ್ಬ ಕಳ್ಳನು ಪ್ರಧಾನಿಯ ಮನೆಯಲ್ಲಿ ಧನ-ಕನಕವಿರಬಹುದೆಂದು ಭಾವಿಸಿ ಕಳ್ಳತನಕ್ಕೆ ಬಂದನು. ಬಸವಣ್ಣನವರ ಮಹಾಮನೆಯು ಯಾವಾಗಲೂ ಮುಕ್ತದ್ವಾರವಾಗಿತ್ತು. ಪ್ರಜೆಗಳು ತಮ್ಮ ಸುಖ-ದುಃಖಗಳನ್ನು ಅರಿಕೆಮಾಡಿಕೊಳ್ಳಲು, ದೂರ ದೂರದ ನಾಡುಗಳಿಂದ ಬಸವಣ್ಣನವರ ದರ್ಶನಕ್ಕೆ ಬರುವ ಶರಣರಿಗಾಗಿ ಮಹಾಮನೆಯ ಬಾಗಿಲು ತೆರೆದಿರುತ್ತಿತ್ತು. ಹೀಗಾಗಿ ಕಳ್ಳಭದ್ರನು ಕೊರಳಲ್ಲಿ ಲಿಂಗ-ರುದ್ರಾಕ್ಷಿ, ಹಣೆಯ ಮೇಲೆ ವಿಭೂತಿ ಧರಿಸಿಕೊಂಡು ಶರಣರಂತೆ ವೇಷಧರಿಸಿ ಮಹಾಮನೆ ಪ್ರವೇಶ ಮಾಡಿದ್ದನು.

ಮಹಾಮನೆಯ ಎಲ್ಲಾ ಕೋಣೆಗಳಲ್ಲಿ ಶರಣ-ಶರಣೆಯರು ಗಾಢವಾದ ನಿದ್ರೆಯಲ್ಲಿದ್ದರು. ಇಡೀ ಮಹಾಮನೆಯ ತುಂಬಾ ಹುಡುಕಿದರೂ ಬೆಳ್ಳಿ-ಬಂಗಾರ, ನಗ-ನಾಣ್ಯ, ಕಾಣಿಸಲೇ ಇಲ್ಲ. ಕೊನೆಗೆ ಬಸವಣ್ಣನವರು ಮಲಗಿರ್ದ ಕೋಣೆಗೆ ಪ್ರವೇಶಿಸಿದನು. ಅವರೂ ಮಂತ್ರಧ್ಯಾನಗೈಯುತ್ತ ನಿದ್ರೆಯಲ್ಲಿದ್ದರು. ಪಕ್ಕದ ಮಂಚದ ಮೇಲೆ ನೀಲಾಂಬಿಕೆಯವರು ಮಲಗಿದ್ದರು. ದೀಪದ ಮಂದ ಬೆಳಕಿನಲ್ಲಿ ಅವರ ಕೊರಳಲ್ಲಿದ್ದ ಚಿನ್ನದಾಭರಣಗಳು, ಕಿವಿಯಲ್ಲಿ ವಜ್ರದ ಹರಳಿನ ಬೆಂಡೋಲೆ ಥಳಥಳಿಸಿ ಹೊಳೆಯುತ್ತಿದ್ದವು. ಕಳ್ಳ ಭದ್ರನು ತನ್ನ ಚಾಲಾಕಿತನದಿಂದ ಕೈಚಳಕ ತೋರಿ ಕೊರಳ ಆಭರಣಗಳನ್ನು ಬಿಚ್ಚಿಕೊಂಡನು. ಕಿವಿಯ ಬೆಂಡೋಲೆ ಬಿಚ್ಚಿಕೊಳ್ಳುವಾಗ ನೀಲಾಂಬಿಕಾ ತಾಯಿಗೆ ಕೂಡಲೇ ಎಚ್ಚರವಾಯಿತು. ತಕ್ಷಣವೇ ಕಳ್ಳ, ಕಳ್ಳ ಎಂದು ಕೂಗಿಕೊಂಡರು. ಕಳ್ಳ ಹೆದರಿ ಕೋಣೆಯಿಂದ ಹೊರಗೋಡಿದ. ಅಲ್ಲಿ ಕಾವಲು ಭಟರ ಕೈಗೆ ಸಿಕ್ಕುಬಿದ್ದನು. ಬಸವಣ್ಣನವರು ಎಚ್ಚರಗೊಂಡು ನೀಲಾಂಬಿಕೆಯೊಂದಿಗೆ ಕೋಣೆಯಿಂದ ಹೊರಬಂದರು. ಈ ಧ್ವನಿ ಕೇಳಿ ಬೇರೆ ಬೇರೆ ಕೋಣೆಗಳಲ್ಲಿದ್ದ ಅಕ್ಕನಾಗಮ್ಮ, ಗಂಗಾಂಬಿಕೆ, ಚೆನ್ನಬಸವಣ್ಣ, ಅಪ್ಪಣ್ಣ ಲಿಂಗಮ್ಮ ಮುಂತಾದವರೂ ಬಂದರು.

ಭಟರು ಕಳ್ಳಭದ್ರನನ್ನು ಹಿಡಿದು ತಂದು ಬಸವಣ್ಣನವರ ಮುಂದೆ ನಿಲ್ಲಿಸಿದರು. ಆತ ಥರಗುಟ್ಟಿ ನಡಗುತ್ತಿದ್ದ. ಆತನ ಶರಣವೇಷ ಕಂಡು, ಲಾಂಛನಕ್ಕೆ ಶರಣೆಂದರು. ಈತ ಕಳ್ಳನೆ ? ಕಳ್ಳನು ಮಹಾಮನೆಗೆ ಕಳ್ಳತನಕ್ಕೆ ಬರಬೇಕಾದರೆ ಆತನಿಗೆ ಬೇಕಾದ ವಸ್ತುಗಳನ್ನು ಸಂಗ್ರಹಿಸಿಟ್ಟುಕೊಂಡಿರುವ ತಾನೂ ಕಳ್ಳನಲ್ಲವೇ? ಅಂತರಂಗದಲ್ಲಿ ಚಿಂತನ-ಮಂಥನ ನಡೆದು, ಅರಿವು ಜಾಗೃತವಾಯಿತು. ಪತ್ನಿ ನೀಲಾಂಬಿಕೆಯೆಡೆಗೆ ನೋಡಿ ನಿಷ್ಠುರವಾಗಿ ಹೇಳಿದರು.

"ಒಡನಿರ್ದ ಸತಿಯೆಂದು ನಚ್ಚಿರ್ದೆನಯ್ಯಾ
ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ
ಅಯ್ಯೊ ನಮ್ಮಯ್ಯನ ಕೈ ನೊಂದಿತ್ತು.
ತೆಗೆದುಕೊಡು ಬೆಂಡೋಲೆ ಕಿತ್ತಿ
ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ
ಕೂಡಲಸಂಗಮದೇವನಲ್ಲದೆ ಮತ್ತಾರೂ ಅಲ್ಲಾ"

ನೀಲಾಂಬಿಕೆಯು ಬೆಂಡೋಲೆ ಬಿಚ್ಚಿ ಕಳ್ಳಭದ್ರನ ಕೈಗೆ ಕೊಡಲು ಹೋದಾಗ, ಆತನು ಪಶ್ಚಾತ್ತಾಪದ ಕಣ್ಣೀರು ಸುರಿಸುತ್ತಾ- ನಾನು ದೇವರಲ್ಲ, ನಾನೊಬ್ಬಕಳ್ಳ ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದ. ಬಸವಣ್ಣನವರು ಆತನನ್ನು ಅಪ್ಪಿಕೊಂಡು ನೀನು ಕಳ್ಳನಲ್ಲ, ನೀನು ನನ್ನ ಕಣ್ಣು ತೆರೆಸಿದ ದೇವರು, ನೀನು ನನ್ನಯ್ಯ ಎಂದು ಹೃದಯತುಂಬಿ ನುಡಿಯಲು, ಕಳ್ಳ ಭದ್ರನ ಹೃದಯ ಪರಿವರ್ತನೆಯಾಗಿ ನಿಜ ಶರಣ ನನ್ನಯ್ಯನೇ ಆದನು. ಈ ಘಟನೆಯ ಮೂಲಕ ಬಸವಣ್ಣನವರು ಪ್ರಧಾನಿಯಾಗಿ ಎಂತಹ ಪ್ರಾಮಾಣಿಕ–ಪಾರದರ್ಶಕ ವ್ಯಕ್ತಿತ್ವ ಹೊಂದಿದ್ದರೆಂಬುದು ತಿಳಿದು ಬರುತ್ತದೆ.

**v) ಮಹಾಮನೆಯ ಆಕಳುಗಳನ್ನು ಕಳ್ಳರು ಕದ್ದೊಯ್ದ ಪ್ರಸಂಗ :**

ಬಸವಣ್ಣನವರ ಮನೆಯಲ್ಲಿ ಪ್ರತಿದಿನ ಸಹಸ್ರಾರುಜನ ಶರಣರು ಸಾಮೂಹಿಕವಾಗಿ ಪ್ರಸಾದ ಮಾಡುತ್ತಿದ್ದರು. ಅನ್ನದಾಸೋಹ ನಿರಂತರವಾಗಿ ಸಾಗುತ್ತಿತ್ತು. ಮಹಾಮನೆಯ ವಿಶಾಲ ಕೊಟ್ಟಿಗೆಯಲ್ಲಿ ನೂರಾರು ಆಕಳುಗಳು ಇದ್ದವು. ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪಕ್ಕೆ ಕೊರತೆಯೇ ಇರಲಿಲ್ಲ. ಈ ಆಕಳುಗಳನ್ನು ಪ್ರತಿದಿನ ಗುಡ್ಡಗಳ ತಪ್ಪಲಲ್ಲಿರುವ ಹುಲ್ಲುಗಾವಲಿಗೆ ಮೇಯಿಸಿಕೊಂಡು ಹೋಗಿ ಬರುವ ತುರುಗಾಹಿ ರಾಮಣ್ಣ ಶರಣರ ನೇತೃತ್ವದಲ್ಲಿ ಹತ್ತಾರು ಜನ ದನಗಾಹಿಗಳಿದ್ದರು. ಒಂದು ದಿನ ಮೇಯಲು ಹೋದ ನೂರಾರು ಆಕಳುಗಳನ್ನು ಬಸವಣ್ಣನವರನ್ನು ದ್ವೇಷಿಸುತ್ತಿದ್ದ ಕೊಂಡೆಮಂಚಣ್ಣಾದಿಗಳು ತಂತ್ರಮಾಡಿ ಕಳ್ಳರಿಗೆ ಜಂಗಮವೇಷ ಹಾಕಿಸಿ, ಕದ್ದೊಯ್ಯುವಂತೆ ಮಾಡಿದರು. ತುರುಗಾಹಿ ರಾಮಣ್ಣ ಹಾಗೂ ಸಂಗಡಿಗರು ವಚನ–ಚಿಂತನ ಮಾಡುತ್ತಾ. ಮೈಮರೆತು ಕುಳಿತಾಗ ಈ ಘಟನೆ ಜರುಗಿತ್ತು. ಸಾಯಂಕಾಲ ಹುಲ್ಲುಗಾವಲಿನಲ್ಲಿ ಒಂದೂ ಆಕಳುಗಳಿರಲಿಲ್ಲ. ಎಷ್ಟು ಹುಡುಕಿದರೂ ಸುಳಿವೇ ಸಿಗಲಿಲ್ಲ. ನಿರಾಶರಾಗಿ ಮಹಾಮನೆಗೆ ಬಂದು ಶರಣ–ಸಂಕುಳಕ್ಕೆ ವಿಷಯ ತಿಳಿಸಿದರು. ದನದ ಕೊಟ್ಟಿಗೆಯಲ್ಲಿ ಆಕಳುಗಳ ನೂರಾರು ಕರುಗಳು ಹಸಿವೆಯಿಂದ, ತಾಯಿ ಆಕಳುಗಳ ಹಂಬಲದಿಂದ ಅಂಬಾ ಎಂದು ಕೂಗಿಡುತ್ತಿದ್ದವು.

ಆಕಳುಗಳನ್ನು ಕಳ್ಳರು ಕದ್ದೊಯ್ದರೆಂಬ ಸಮಾಚಾರವು ಸಂಜೆ

ಬಸವಣ್ಣನವರಿಗೆ ತಲುಪಿದಾಗ, ತುರುಗಾಹಿ ರಾಮಣ್ಣ ಹಾಗೂ ಅವರ ಸಂಗಡಿಗ ಶರಣರನ್ನು ಕುರಿತು–

ಆಕಳ, ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ
ನಿಮ್ಮ ಧರ್ಮ !
ಬೊಬ್ಬಿಡದಿರಿಂ ಭೋ, ನಿಮ್ಮ ಧರ್ಮ !
ಅಲ್ಲಿ ಉಂಬಡೆ ಸಂಗ, ಇಲ್ಲಿ ಉಂಬಡೆ ಸಂಗ,
ಕೂಡಲಸಂಗಮದೇವ ಏಕೋಭಾವ.

ಎಂದು ತಿಳಿವಳಿಕೆ ಹೇಳಿದರು. ಆ ಕಳ್ಳರಿಗೆ ಹಾಗೂ ಅವರ ಮಕ್ಕಳಿಗೆ ಹಾಲಿನ ಕೊರತೆ ಇದ್ದಿರಬಹುದೇನೋ ! ಅದಕ್ಕಾಗಿ ಒಯ್ದಿರಬಹುದು. ಎಲ್ಲವೂ ದೇವರಿಚ್ಛೆ. ಅಲ್ಲಿಯಾದರೂ ಹಾಲು ಉಂಬುವವರು ದೇವರೇ, ಇಲ್ಲಿ ಉಂಬುವವರೂ ದೇವರೇ. ದೇವರು ಏಕೋ ಭಾವವಾಗಿರುವುದರಿಂದ ದುಃಖಿಸಬೇಡಿ ಎಂದು ಸಾಂತ್ವನ ಹೇಳಿದರು. ಮಹಾಮನೆಯ ಕೊಟ್ಟಿಗೆಯಲ್ಲಿ ಹಸಿವೆಯಿಂದ ಕೂಗಿಡುತ್ತಿದ್ದ ಕರುಗಳನ್ನು ಸಹ ದನಗಾಹಿ ಶರಣರೊಂದಿಗೆ ಗುಡ್ಡಗಳಾಚೆಗೆ ಕಳಿಸಿಕೊಟ್ಟರು. ಕರುಗಳು ಬಹುದೂರದಿಂದಲೇ ತಾಯಿ ಆಕಳುಗಳ ಧ್ವನಿ ಗುರುತಿಸಿ, ಓಡಿ ಹೋದವು. ದನಗಾಹಿಗಳು ಅವುಗಳನ್ನು ಅನುಸರಿಸಿ ಹೋದಾಗ ಆಕಳುಗಳ ಜತೆ ಕಳ್ಳರು ಇದ್ದುದು ಕಂಡು ಬಂದಿತು.

ಬಸವಣ್ಣನವರು ಮಾತೃಹೃದಯವುಳ್ಳವರಾಗಿ, ಕರುಗಳನ್ನೂ ಸಹ ನಿಮಗೆ ಕಳಿಸಿಕೊಟ್ಟಿದ್ದಾರೆ. ಆಕಳು–ಕರುಗಳನ್ನು ಸಾಕಿಕೊಂಡು ಹಾಲು–ಹೈನ ಉಂಡು ಆನಂದವಾಗಿರಿ ಎಂದು ಹೇಳಿ ಕಳಿಸಿದ್ದಾರೆ. ಎಂದು ತುರುಗಾಹಿ ರಾಮಣ್ಣ ಶರಣರು ನುಡಿಯಲು, ಕಳ್ಳರ ಹೃದಯ ಪರಿವರ್ತನೆಯಾಗಿ, ತಾವು ಕೊಂಡೆಯರ ಮಾತು ಕೇಳಿ ಅಪರಾಧ ಮಾಡಿದೆವೆಂದು ಪಶ್ಚಾತ್ತಾಪ ಪಟ್ಟು, ಎಲ್ಲ ಆಕಳುಗಳು ಹಾಗೂ ಕರುಗಳನ್ನು ತಂದು ಮಹಾ ಮನೆಗೆ ಒಪ್ಪಿಸಿ ಕ್ಷಮೆಯಾಚಿಸಿದರು. ಬಸವಣ್ಣನವರ ಕಾರುಣ್ಯಕ್ಕೆ ಪಾತ್ರರಾಗಿ ಕಳ್ಳತನದ ವೃತ್ತಿ ತೊರೆದು, ಕಾಯಕ ಜೀವಿಗಳಾಗಿ ಪರಿವರ್ತಿತರಾದರು.

### vi) ಬಿಜ್ಜಳನು ಭಂಡಾರದ ಸಂಗ್ರಹ ಪರೀಕ್ಷೆ ಮಾಡಿದ್ದು :

ಬಸವಣ್ಣನವರ ಅನುಭವ ಮಂಟಪದ ಕೀರ್ತಿವಾರ್ತೆಕೇಳಿ, ಸಮಗ್ರ ಭಾರತದಾದ್ಯಂತದಿಂದ ಸಹಸ್ರ–ಸಹಸ್ರ ಸಂಖ್ಯೆಯಲ್ಲಿ ಭಕ್ತರು, ಶರಣರು ಬಸವಣ್ಣನವರ ದರ್ಶನಕ್ಕೆ ಬಂದು ಹೋಗುತ್ತಿದ್ದರು. ಕೆಲವರು ಕಾಯಕಜೀವಿ ಶರಣರಾಗಿ ಅಲ್ಲಿಯೇ ಉಳಿಯುತ್ತಿದ್ದರು. ಮಹಾಮನೆಯಲ್ಲಿ ನಿರಂತರವಾಗಿ ಪ್ರಸಾದ ದಾಸೋಹ ನಡೆಯುತ್ತಿತ್ತು. ಈ ಮಹಾಕಾರ್ಯವನ್ನು ಕಂಡು ಅಸೂಯೆ–ಮತ್ಸರ ಪಟ್ಟಂತಹ ಕೊಂಡೆಯ ಮಂಚಣ್ಣ–ನಾರಾಯಣ ಕ್ರಮೀತ ಮುಂತಾದ ವಿರೋಧಿಗಳು ಮೇಲಿಂದ

ಮೇಲೆ ಬಿಜ್ಜಳರಾಜನಲ್ಲಿ 'ಬಸವಣ್ಣನವರು ರಾಜಭಂಡಾರದ ಸಂಪತ್ತನ್ನು ಶರಣ ಜಂಗಮ–ದಾಸೋಹಕ್ಕೆ ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ' ಎಂದು ಆರೋಪ, ಚಾಡಿ ಹೇಳುತ್ತಿದ್ದರು. ಇವರ ಆರೋಪಗಳನ್ನು ಕೇಳಿ ಕೇಳಿ ರೋಸಿ ಹೋದ ಬಿಜ್ಜಳನು ಒಂದು ಸಲ ರಾಜ ಭಂಡಾರಕ್ಕೆ ಭೇಟ್ಟಿ ಕೊಟ್ಟು ಪರೀಕ್ಷಿಸಲು ಆದೇಶಿಸಿದನು. ಗಣಕರು, ಭಂಡಾರದ ಅಧಿಕಾರಿಗಳು, ಕರಣಿಕರು ಸಮಗ್ರ ಧನ–ಕನಕ ಎಣಿಸಿದಾಗ ರಾಜಭಂಡಾರದ ಸಂಪತ್ತು ಹೆಚ್ಚುತ್ತಾ ಸಾಗಿತ್ತೇ ವಿನಹ ಕಡಿಮೆಯಾಗಿರಲಿಲ್ಲ. ಬಿಜ್ಜಳನಿಗೆ ಸಮಾಧಾನವಾಯಿತು. ವಿರೋಧಿಗಳು ತಲೆತಗ್ಗಿಸಿದರು. ಆಗ ಬಸವಣ್ಣನವರು ನ್ಯಾಯ ನಿಷ್ಟುರತೆಯಿಂದ–ದೃಢವಾಗಿ ಹೇಳಿದರು–

ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು
ಓರೆಯಾವಿನ ಬೆನ್ನ ಹರಿಯಲದೇಕಯ್ಯಾ ?
ಕೂಡಲಸಂಗಮದೇವನುಳ್ಳನ್ನಕ್ಕೆ
ಬಿಜ್ಜಳನ ಭಂಡಾರವೆನಗೇಕಯ್ಯಾ ?

ಬಸವಾದಿ, ಶರಣರು, ಬಸವಧರ್ಮದ ಗುರುಲಿಂಗ ಜಂಗಮರು ಸತ್ಯ ಶುದ್ಧ ಕಾಯಕ ಜೀವಿಗಳಾಗಿದ್ದರು. ತಮ್ಮ ಕಾಯಕಗಳ ಪ್ರತಿಫಲವನ್ನು ದಾಸೋಹಕ್ಕೆ ಅರ್ಪಿಸಿ ಪ್ರಸಾದ ಸ್ವೀಕರಿಸುತ್ತಿದ್ದರು. ನಾಡಿನೆಲ್ಲೆಡೆಯಿಂದ ಆಗಮಿಸುತ್ತಿದ್ದ ಭಕ್ತರು ತಮ್ಮ ಕೃಷಿ–ಕೃತ್ಯ ಕಾಯಕದ ದವಸ–ಧಾನ್ಯಗಳನ್ನು ತಂದು ದಾಸೋಹಕ್ಕೆ ಅರ್ಪಿಸಿ, ಪ್ರಸಾದ ಸ್ವೀಕರಿಸುತ್ತಿದ್ದರು. ಇಂತಹ ಪ್ರಾಮಾಣಿಕತೆ ಇದ್ದುದರಿಂದಲೇ ಭಕ್ತರು, ಶರಣರು ಬಸವಣ್ಣ, ಬಸವಪ್ಪ, ಬಸವತಂದೆ, ಬಸವಯ್ಯ, ಬಸವರಾಜ, ಬಸವರಸ, ಬಸವಗುರು, ಬಸವದೇವ ಎಂದು ಭಕ್ತಿ ಭಾವದಿಂದ ಸ್ತುತಿಸುತ್ತಿದ್ದರು.

ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರ್ಕು
ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ.
ನೆರೆಯದ ವಸ್ತು ನೆರೆವುದು ನೋಡಯ್ಯಾ.
ಅರಸು ಪರಿವಾರ ಕೈವಾರ ನೋಡಯ್ಯಾ.
ಪರಮನಿರಂಜನನ ಮರೆವ ಕಾಲಕ್ಕೆ
ತುಂಬಿದ ಹರವಿಯ ಕಲ್ಲು ಕೊಂಡಂತೆ
ಕೂಡಲಸಂಗಮದೇವಾ

ಎಂಬ ಎಚ್ಚರವನ್ನು ಜಾಗ್ರ–ಸ್ವಪ್ನ–ಸುಷಪ್ತಿಯಲ್ಲಿಯೂ ಬಸವಣ್ಣನವರು ಹೊಂದಿದ್ದರು ಎಂಬುದನ್ನು ಕಾಣುತ್ತೇವೆ.

ಈ ರೀತಿಯ ಹಲವಾರು ಘಟನೆಗಳು–ಪ್ರಸಂಗಗಳಲ್ಲಿ ಬಸವಣ್ಣನವರ ನಿರ್ಮಲ, ಪ್ರಾಮಾಣಿಕ, ವ್ಯಕ್ತಿತ್ವ, ಶುದ್ಧ ಚಾರಿತ್ರ್ಯ ಕಂಡು ಬರುತ್ತದೆ.

## ೮. ಕಲ್ಯಾಣ ಕ್ರಾಂತಿ–ಮರಣವೇ ಮಹಾನವಮಿ :

ಬಸವಣ್ಣನವರು 'ಅನುಭವ ಮಂಟಪ' ಸ್ಥಾಪಿಸಿದಾಗ ನಾಡಿನ ಎಲ್ಲೆಡೆಯಿಂದ ಆಗಮಿಸಿದ್ದ ಶರಣ–ಶರಣೆಯರಲ್ಲಿ ೭೭೦ ಅಮರಗಣಂಗಳು, ಬಸವಧರ್ಮ–ಸಮಾಜ–ಸಂಸ್ಕೃತಿಯ ಜೀವಾಳವಾಗಿದ್ದಾರೆ. ಅಲ್ಲಮಪ್ರಭುದೇವರ ಅಧ್ಯಕ್ಷತೆಯಲ್ಲಿ ಅಖಂಡ ೨೭ ವರುಷಗಳ ಕಾಲ ಅನುಭಾವಗೋಷ್ಠಿ ಜರುಗಿ, ಕೋಟಿ–ಕೋಟಿ ವಚನಗಳು ರಚನೆಯಾದವು. ಲಿಂಗ ಲಕ್ಷದ ಮೇಲಣ ೯೬ ಸಾಹಸಿಗ ಚರಜಂಗಮರು ಅಖಂಡ ಭಾರತವನ್ನು ಸಂಚರಿಸಿ ಬಸವಗುರು ಪ್ರಣೀತ ಇಷ್ಟಲಿಂಗ ಪರಂಪರೆಯ ಹೊಸ ಧರ್ಮದ ಪ್ರಸಾರ ಗೈದರು. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಬಸವಾದಿ ಶರಣರ ವಚನಸಂದೇಶ ತಲುಪಿದವು.

### i) ಶರಣ ಹರಳಯ್ಯ–ಕಲ್ಯಾಣಮ್ಮರು–ಚಮ್ಮಾವುಗೆ ಪ್ರಸಂಗ :

ಕಲಬುರ್ಗಿ ಜಿಲ್ಲೆಯ ಸುರಪುರ ಪ್ರಾಂತದಿಂದ ಕಲ್ಯಾಣಕ್ಕೆ ಆಗಮಿಸಿದ ಶರಣ ಸಮಗಾರ ಹರಳಯ್ಯ–ಕಲ್ಯಾಣಮ್ಮ ದಂಪತಿಗಳು, ಮಗ ಶೀಲವಂತಯ್ಯ ಗುರು ಬಸವಣ್ಣನವರ ಸಮಗ್ರಕ್ರಾಂತಿಗೆ ಕಾರಣರಾದರು. ಬಸವಗುರುವಿನಿಂದ ದೀಕ್ಷಾಸಂಸ್ಕಾರ ಪಡೆದು ಇಷ್ಟಲಿಂಗಧಾರಿಗಳಾಗಿ, ಚಮ್ಮಾವುಗೆ ಕಾಯಕ ಕೈಕೊಂಡು, ಪ್ರತಿದಿನ ಅನುಭವ ಮಂಟಪದಲ್ಲಿ ಅನುಭಾವಿ ಶರಣರ ಗೋಷ್ಠಿಯಲ್ಲಿ ಭಾಗವಹಿಸುತ್ತಿದ್ದರು.

ಒಂದು ದಿನ ಹರಳಯ್ಯ ಶರಣರು ಚಮ್ಮಾವುಗೆಗಳನ್ನು ಕಲ್ಯಾಣದಲ್ಲಿ ಮಾರಾಟ ಮಾಡಿ, ರಾಜಬೀದಿಯಲ್ಲಿ ಸಾಗಿಬರುತ್ತಿದ್ದಾಗ, ಅದೇ ಸಮಯಕ್ಕೆ ಪ್ರಧಾನಿ ಬಸವಣ್ಣನವರು ಅಶ್ವಾರೂಢರಾಗಿ ಅರಮನೆಯ ಕಾಯಕ ಪೂರೈಸಿ, ತಮ್ಮ ಮಹಾಮನೆಗೆ ಪ್ರಸಾದಕ್ಕೆಂದು ಹೊರಟಿದ್ದರು. ರಾಜಬೀದಿಯ ಎರಡೂ ಬದಿಗಳಲ್ಲಿ ಪ್ರಜೆಗಳು ಭಕ್ತಿ ಭಾವದಿಂದ ಶರಣು ಸಲ್ಲಿಸುತ್ತಿದ್ದರು. 'ಬಾಗಿದ ತಲೆ, ಮುಗಿದ ಕೈಯ ಪ್ರಧಾನಮಂತ್ರಿ ಧರ್ಮಪಿತ ಬಸವಗುರುವಿನ ದರ್ಶನವಾಗುತ್ತಲೇ ಹರಳಯ್ಯ ಶರಣರು ಭಕ್ತಿಯಿಂದ **'ಶರಣು ಬಸವ ಗುರುವೆ'** ಎಂದು ಕೈಜೋಡಿಸಿದರು. ಶರಣ ಹರಳಯ್ಯನವರ ಸಾತ್ವಿಕ ವ್ಯಕ್ತಿತ್ವ, ಕೊರಳಲ್ಲಿ ಇಷ್ಟಲಿಂಗ, ಹಣೆಯ ಮೇಲೆ ಶುಭ್ರ ವಿಭೂತಿ, ಕಂಡು ಬಸವಣ್ಣನವರು ಆತ್ಮೀಯತೆಯಿಂದ **'ಶರಣು ಶರಣಾರ್ಥಿ ಶರಣ ಹರಳಯ್ಯನವರೆ'** ಎಂದು ಕೈಜೋಡಿಸಿ ವಂದಿಸಿದರು. ಪ್ರಜೆಗಳ ಶರಣುಗಳಿಗೆ ಪ್ರತಿಯಾಗಿ ಶರಣು ಸಲ್ಲಿಸುತ್ತಾ ಬಸವಣ್ಣನವರು ಮಹಾಮನೆಗೆ ತೆರಳಿದರು.

ಇತ್ತ ಹರಳಯ್ಯ ಶರಣರು ರಾಜಬೀದಿಯ ಪಕ್ಕದಲ್ಲಿ ಒಂದು ಕ್ಷಣ ಏನೂ ತೋಚದೆ ನಿಂತರು, ಮರಳಿ ಎಚ್ಚರಗೊಂಡು ಯೋಚನೆಯಲ್ಲಿ ಮಗ್ನರಾಗಿ ತಮ್ಮ ಕುಟೀರದತ್ತ ಸಾಗಿದರು. ತಮ್ಮ ಪೂರ್ವಾಶ್ರಮದ ಜೀವನ ನೆನಪಿಸಿಕೊಂಡರು.

ಉಚ್ಚ ವರ್ಣೀಯರು ರಸ್ತೆಯಲ್ಲಿ ಬಂದರೆ, ಒಂದು ಬದಿಗೆ ಸರಿದು ತಲೆಬಾಗಿಸಿ ದೀನನಾಗಿ ನಿಲ್ಲುವದೆಲ್ಲಿ ? ಇಂದಿನ ಘಟನೆ ಎಲ್ಲಿ ? ತಮಗೆ ಧರ್ಮದೀಕ್ಷೆಯನಿತ್ತು ಸಮಾಜೋ ಧಾರ್ಮಿಕ ಸ್ವಾತಂತ್ರ್ಯ ಕಲ್ಪಿಸಿ, ಸ್ವಾಭಿಮಾನ- ಕಾಯಕ ಗೌರವವಿತ್ತ ಮಹಾಮಹಿಮ ಬಸವಗುರು ತನ್ನ ಒಂದು **'ಶರಣು'** ಎಂಬ ನುಡಿಗೆ **'ಶರಣು-ಶರಣಾರ್ಥಿ'** ಎಂಬ ಎರಡು ನುಡಿಗಳು ! ಈ ಹೆಚ್ಚಿನಭಾರ ಹೇಗೆ ಇಳಿಸಲಿ ? ಬಸವಾ ಬಸವಲಿಂಗ ಬಸವಗುರುವೆ ಶರಣು ತಂದೆ ಎಂದು ಜಪಿಸುತ್ತಾ ಗುಡಿಸಲು ತಲುಪಿದರು. ಪತಿ ಹರಳಯ್ಯನವರ ಚಿಂತಾಕ್ರಾಂತ ಮುಖ ಕಂಡ ಪತ್ನಿ ಕಲ್ಯಾಣಮ್ಮ, ಮಗ ಶೀಲವಂತಯ್ಯ ಈ ಚಿಂತೆಗೆ ಕಾರಣವೇನು ? ಎಂದು ಕೇಳಿದಾಗ, ಹರಳಯ್ಯ ಶರಣರು ಘಟನೆಯನ್ನು ವಿವರಿಸಿದರು. ಆಗ ಶರಣೆಯು ಪರಿಹಾರ ಸೂಚಿಸಿದರು.

ಮಡದಿ ಕಲ್ಯಾಣಮ್ಮ ತೊಡಕು ಬಿಡಿಸಿದಳಾಕೆ
ಗಡನೊಂದು ಜೋಡು ಕೆರ ಮಾಡಿ । ಬಸವರಿಗೆ
ಒಡೆಯಾ ಮಚ್ಚೆಂದು ಅರ್ಪಿಸಿರಿ ॥

ಮುಗ್ಧಭಕ್ತಿಯ ಶರಣದಂಪತಿಗಳು ತಮ್ಮದೊಂದೊಂದು ತೊಡೆಗಳ ಚರ್ಮವನ್ನು ಬಸವಮಂತ್ರದೊಂದಿಗೆ ವಿಭೂತಿ ಸ್ಪರ್ಶಿಸಿ-ಪಾದೋದಕ ಸಿದ್ಧಪಡಿಸಿಕೊಂಡು, ತೊಡೆಗಳಿಗೆ ಲೇಪಿಸಿ, ಬಸವಾ ಬಸವಾ ಎಂದು ಮಂತ್ರಧ್ಯಾನ ಮಾಡುತ್ತಾ'ರೆಂಪಿಗೆ'ಯಿಂದ ಚರ್ಮಸುಲಿದು ತೆಗೆದರು. ತೊಡೆಗಳ ಘಾಯಕ್ಕೆ ವಿಭೂತಿ ಸವರಿದರು. ತಮ್ಮಲ್ಲಿ ಮೊದಲೇ ಹದಮಾಡಿ ಇಟ್ಟುಕೊಂಡಿದ್ದ ಚಮ್ಮಾವುಗೆಯ ಮೇಲೆ, ತಮ್ಮ ಚರ್ಮಗಳನ್ನು ಅಂಟಿಸಿ, ಹೊಲಿದು ಸುಂದರವಾದ ಒಂದು ಜೊತೆ **'ಚಮ್ಮಾವುಗೆ'**ಗಳನ್ನು ಸಿದ್ಧಪಡಿಸಿದರು. ಅದಕ್ಕೆ ರೇಶ್ಮೆಯ ದಾರದ ಹೊಲಿಗೆ, ರೇಶ್ಮೆಯ ಚಿಕ್ಕ ಚಿಕ್ಕ ಗೊಂಡೆಗಳ ಅಲಂಕಾರ ಮಾಡಿದರು. ತಮ್ಮ ಬಾಳನ್ನು ಉದ್ಧಾರಗೈದ ಧರ್ಮಗುರುವಿನ ಪಾದಕ್ಕೆ ಅರ್ಪಿಸಿ, ಭಾರ ಇಳಿಸಿಕೊಂಡು ಧನ್ಯರಾಗಬೇಕೆಂದು ರೇಶ್ಮೆ ವಸ್ತ್ರದಲ್ಲಿ ಸುತ್ತಿಕೊಂಡು, ಬಿದಿರ ಬುಟ್ಟಿಯಲ್ಲಿಟ್ಟು ತಲೆಮೇಲೆ ಹೊತ್ತುಕೊಂಡು ಸುಪ್ರಭಾತ ಸಮಯದಲ್ಲಿ ಬಸವ ಮಹಾಮನೆಗೆ ಬಂದರು.

ಶರಣ ಹರಳಯ್ಯ ದಂಪತಿಗಳು ಮಗ ಶೀಲವಂತನೊಂದಿಗೆ ಆಗಮಿಸಿದುದನ್ನು ಪೂಜಾಕೋಣೆಯಲ್ಲಿ ಲಿಂಗಪೂಜೆಯಲ್ಲಿದ್ದ ಬಸವಣ್ಣನವರಿಗೆ ಗೊತ್ತಾಗಿ, ನೀಲಾಂಬಿಕೆ, ಗಂಗಾಂಬಿಕೆ, ಅಕ್ಕನಾಗಮ್ಮ, ಚೆನ್ನಬಸವಣ್ಣ, ಬಾಲಸಂಗಯ್ಯ ಹಡಪದ ಅಪ್ಪಣ್ಣ-ಲಿಂಗಮ್ಮನವರುಗಳು ಮಹಾಮನೆಯ ದ್ವಾರಬಾಗಿಲಿಗೆ ಬಂದು ಪಾದಕ್ಕೆ ನೀರು ಹಾಕಿ ಒಳಗೆ ಕರೆದೊಯ್ದರು. ಹರಳಯ್ಯ ಶರಣರು ಹೃದಯ ತುಂಬಿ ಬಂದು ಭಾವುಕರಾದರು. ಬಸವಣ್ಣನವರು ಹರಳಯ್ಯ ಶರಣರಿಗೆ ಮುಂಜಾವಿನಲಿ ಬಂದ ಕಾರಣ ಕೇಳಲು, ಅವರು ಭಕ್ತಿಯಿಂದ ತಾವು ತಂದ ಚಮ್ಮಾವುಗೆ ಬಸವಣ್ಣನವರ ಪಾದಗಳ ಹತ್ತಿರ ಇಟ್ಟು, ಇವುಗಳನ್ನು ತಾವು ಪಾದಗಳಿಗೆ

ರಕ್ಷೆಯಾಗಿ ಧರಿಸಿ ನಮ್ಮನ್ನು ಋಣಮುಕ್ತರಾಗಿಸಿ ಗುರುವೆ ಎಂದು ಬೇಡಿಕೊಂಡರು.

ಆ ಚಮ್ಮಾವುಗೆಗಳನ್ನು ಕೈಯಲ್ಲಿ ತೆಗೆದುಕೊಂಡ ಬಸವಣ್ಣನವರು, ಅವುಗಳ ಮೇಲ್ಮೈ ಮೃದವಾದ ಚರ್ಮ ಸ್ಪರ್ಶಿಸಿ, ಇದಾವ ಪ್ರಾಣಿಯ ಚರ್ಮ? ಎಷ್ಟೊಂದು ಮೃದುವಾಗಿದೆ ಶರಣರೆ? ಎನ್ನಲು, ಹರಳಯ್ಯ ಶರಣರು ಕಂಬನಿದುಂಬಿ ಸತ್ಯಸಂಗತಿ ಹೇಳಲು, ಬಸವಣ್ಣನವರಿಗೆ ಈ ಶರಣದಂಪತಿಗಳ ನಿರ್ಮಲ ಮುಗ್ಧ ಭಕ್ತಿ ಕಂಡು ಮೂಕವಿಸ್ಮಿತರಾಗಿ ನುಡಿದರು–

ನಿಮ್ಮ ಶರಣರ ಚಮ್ಮಾವುಗೆಗೆ
ಪೃಥ್ವಿ ಸಮಬಾರದು, ಸರಿಯಲ್ಲ ನೋಡಾ
ಕೂಡಲಸಂಗಮದೇವಾ
ನಿಮ್ಮ ಶರಣರ ಚಮ್ಮಾವುಗೆಗೆ !

ಎಂದು ಅವುಗಳನ್ನು ತಲೆಯ ಮೇಲೆ ಇಟ್ಟುಕೊಂಡು ಭಕ್ತಿಯಿಂದ ಕುಣಿದಾಡಿದರು. ಶರಣ ಹರಳಯ್ಯನವರೆ, ಇವು ಕೂಡಲಸಂಗಮದೇವಂಗೆ ಅರ್ಪಿತವಾಗಲಿ, ಎಂದು ಮರಳಿ ಒಪ್ಪಿಸಿದರು. ಈ ಘಟನೆಗೆ ಸಾಕ್ಷಿಯಾಗಿದ್ದ ಮಹಾಮನೆಯಲ್ಲಿದ್ದ ಶರಣ ಶರಣೆಯರು ಆಶ್ಚರ್ಯದಿಂದ ಭಕ್ತಿಭಾವಪರವಶರಾಗಿ ಹರಳಯ್ಯ–ಕಲ್ಯಾಣಮ್ಮ ದಂಪತಿಗಳ ಮುಗ್ಧಭಕ್ತಿಯನ್ನು ಕೊಂಡಾಡಿದರು.

ಅಂದು ಬೆಳಗಿನ ಅರ್ಚನೆ–ಅರ್ಪಣೆ–ಅನುಭಾವ ಬಸವಣ್ಣನವರ ಮಹಾಮನೆಯಲ್ಲಿಯೇ ಪೂರೈಸಿಕೊಂಡು ಶರಣ ಹರಳಯ್ಯನವರು ತಮ್ಮ ಮನೆಗೆ ತೆರಳಿದರು. ಮಾರ್ಗಮಧ್ಯದಲ್ಲಿ ಉಚ್ಚವರ್ಣದ ಮಧುವರಸ ಮಂತ್ರಿಯ ಕಣ್ಣಿಗೆ ಈ ಚಮ್ಮಾವುಗೆ ಹೊತ್ತ ಹರಳಯ್ಯ ಕಂಡು ಬಂದು, ಅಹಂಕಾರದಿಂದ ಚಮ್ಮಾವುಗೆ ಕಿತ್ತುಕೊಂಡು ಕಾಲಲ್ಲಿ ಮೆಡಲು, ತಕ್ಷಣವೇ ಆ ಮಂತ್ರಿಯು ಅಗ್ನಿ ಕುಂಡದಲ್ಲಿ ಬಿದ್ದವರಂತೆ 'ಉರಿ ಉರಿ' ಎಂದು ಚೀರಾಡುತ್ತಾ ತನ್ನ ಮಹಲಿಗೆ ಹೋದನು. ಇತ್ತ ಹರಳಯ್ಯನವರು ತಮ್ಮ ಕುಟೀರಕ್ಕೆ ಬಂದರು.

ಅತ್ತ ಮಧುವರಸ ಮಂತ್ರಿಯ ಶರೀರವೆಲ್ಲಾ ಕಾಯ್ದು, ಜ್ವರದ ತಾಪದಿಂದ ಹಲುಬತೊಡಗಿದನು..

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ
ಉರಿವ ಕೊಳ್ಳಿಯಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ
ಹುಲಿಯ ಮೀಸೆಯ ಹಿಡಿದು ಒಲಿದುಯ್ಯಾಲೆಯಾಡುವಂತೆ
ಕೂಡಲಸಂಗನ ಶರಣರೊಡನೆ ಮರೆತು ಸರಸವಾಡಿದಡೆ
ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ!

### ii) ಬ್ರಾಹ್ಮಣ ಮಧುವರಸ ಮಂತ್ರಿಯ ಹೃದಯ ಪರಿವರ್ತನೆ :

ಶರಣರೊಡನೆ ಅಹಂಕಾರದಿಂದ ಸರಸವಾಡಿದರೆ ಅದರ ಪರಿಣಾಮವನ್ನು ಮಧುವರಸ ಅನುಭವಿಸತೊಡಗಿದನು. ಸವರ್ಣಿಯ ಪುರೋಹಿತರ ಸಲಹೆಯಂತೆ ಎಲ್ಲಾ ತೀರ್ಥಕ್ಷೇತ್ರಗಳ ನದಿ ನೀರು ತಂದು ಸ್ನಾನಮಾಡಿಸಿದರೂ ತಾಪ ಆರಲಿಲ್ಲ. ಕೊನೆಗೆ ಮಧುವರಸರ ಮಗಳು ಲಾವಣ್ಯವತಿ ತನ್ನ ತಂದೆಯ ಸಂಕಟ, ಹಲಬುವಿಕೆ ನೋಡಲಾಗದೆ, ಗುರುಬಸವಣ್ಣನವರಲ್ಲಿ ಪರಿಹಾರ ಕೇಳಿದಳು. ಆಗ ಅಪ್ಪ ಬಸವಣ್ಣನವರು ' ಯಾವ ಶರಣ ಹರಳಯ್ಯನವರನ್ನು ಕೀಳು ಜಾತಿಯವನೆಂದು, ಆತನ ಕಾಯಕವನ್ನು ಕೀಳೆಂದು ಜರಿದು, ದುರಹಂಕಾರದಿಂದ ವರ್ತಿಸಿದನೋ, ಅದೇ ಶರಣನ ಗುಡಿಸಲಿನಲ್ಲಿರುವ ಅವರ ಕಾಯಕದ ಕರಿಬಾನೆಯ ನೀರು ತಂದು ಸ್ನಾನ ಮಾಡಿಸು' ಎಂದು ಸಲಹೆ ನೀಡಿದರು. ಅದರಂತೆ ಲಾವಣ್ಯವತಿಯು ಹರಳಯ್ಯ ಶರಣರ ಮನೆಗೆ ಹೋಗಿ, ಅವರು ಕೊಟ್ಟ ಕರಿಬಾನೆಯ ನೀರು ತಂದು ಸ್ನಾನ ಮಾಡಿಸಲು, ಮಧುವರಸರ ಅಷ್ಟಮದ ಜರ್‍ರನೆ ಜರಿದು ಹೋಯಿತು, ಅಹಂಕಾರ ಇಳಿಯಿತು, ಪಶ್ಚಾತ್ತಾಪ ಪಟ್ಟನು. ಶರಣರ ದರ್ಶನಕ್ಕೆ ಬಂದು ಕ್ಷಮೆ ಕೇಳಿದನು.

### iii) ಲಾವಣ್ಯ ಶೀಲವಂತಯ್ಯಗಳ ಕಲ್ಯಾಣ ಮಹೋತ್ಸವ :

ಈ ಘಟನೆಯ ನಂತರ ಮಧುವರಸ ಮಂತ್ರಿಯು ತನ್ನ ಮಗಳು ಸಹಿತವಾಗಿ ಅನುಭವ ಮಂಟಪದಲ್ಲಿ 'ಹರಳಯ್ಯ-ಕಲ್ಯಾಣಮ್ಮ' ದಂಪತಿಗಳಿಂದಲೇ ಇಷ್ಟಲಿಂಗ ಸಂಸ್ಕಾರ ಹೊಂದಿ ಬಸವಧರ್ಮ ಸ್ವೀಕರಿಸಿದರು. ಅನುಭವ ಮಂಟಪದ ಶರಣರಾಗಿ ಬಸವಣ್ಣನವರ ಕಾರ್ಯಗಳಿಗೆ ಸಹಕಾರ ನೀಡಿದರು. ಶರಣ ಹರಳಯ್ಯನವರ ಮಗ ಶೀಲವಂತಯ್ಯ ಹಾಗೂ ಶರಣ ಮಧುವರಸರ ಮಗಳು ಲಾವಣ್ಯವತಿ ಮದುವೆ ವಯಸ್ಸಿಗೆ ಬಂದುದರಿಂದ, ಮದುವೆ ಮಾಡಲು ಯೋಚಿಸಿದರು. ಶರಣ ಹರಳಯ್ಯ ಹಾಗೂ ಮಧುವರಸರು ತಮ್ಮ ತಮ್ಮ ಪೂರ್ವಾಶ್ರಮದ ಜಾತಿಗಳನ್ನು ನಿರಸನಗೈದು 'ಲಿಂಗಾಯತ ಧರ್ಮಿಯರಾದ್ದರಿಂದ ಬಸವಾದಿ ಶರಣರ ಒಪ್ಪಿಗೆ ಪಡೆದು **'ಕಲ್ಯಾಣಮಹೋತ್ಸವ'** ಮೂಲಕ ಶೀಲವಂತಯ್ಯ ಹಾಗೂ ಲಾವಣ್ಯವತಿ ದಂಪತಿಗಳಾದರು.

ಬಸವಾದಿ ಶರಣರ ಪ್ರಕಾರ ಈ ಮದುವೆಯು ಲಿಂಗಾಯತಧರ್ಮ ತತ್ವ-ಸಿದ್ಧಾಂತದ ಪ್ರಕಾರ ಸಮಾನ ಧರ್ಮೀಯರ ಸಂಬಂಧವಾದರೆ, ಅಂದಿನ ಕಾಲದ ವರ್ಣವಾದಿಗಳ ಪ್ರಕಾರ ಇದು ವಿಲೋಮ ವಿವಾಹ (ಅಂದರೆ ಮೇಲ್ಜಾತಿಯ ಬ್ರಾಹ್ಮಣ ಕನ್ಯೆ ಹಾಗೂ ಕೆಳಜಾತಿಯ ಸಮಗಾರ ವರನೊಂದಿಗೆ 'ವರ್ಣಸಂಕರ') ಎಂದು ಗಲಾಟೆ ಎಬ್ಬಿಸಿದರು. ಆ ಕಾಲದಲ್ಲಿ ಮೇಲಿನ ವರ್ಣದವರು ಕೆಳಗಿನ

ವರ್ಣಗಳ ಕನ್ಯೆಯರನ್ನು ಅನುಲೋಮ ವಿವಾಹ ಮಾಡಿಕೊಂಡು ಉಪಪತ್ನಿ ದರ್ಜೆ ನೀಡುತ್ತಿದ್ದರು. ಆದರೆ ಇಲ್ಲಿ ನಡೆದ ಶೀಲವಂತಯ್ಯ ಹಾಗೂ ಲಾವಣ್ಯವತಿಯರ ವಿವಾಹವು ಚಾತುರ್ವರ್ಣಧರ್ಮ-ಸಮಾಜದ ಪದ್ಧತಿ ಪ್ರಕಾರ ವಿಲೋಮ ವಿವಾಹವೆಂದೂ, ಅಂತರ್ ಜಾತೀಯ ವಿವಾಹವೆಂದೂ ಪರಿಗಣಿಸಿ ಕರ್ಮಠ ಸಂಪ್ರದಾಯವಾದಿಗಳು ಬಿಜ್ಜಳ ರಾಜನಲ್ಲಿ ನ್ಯಾಯಕ್ಕಾಗಿ ಮೊರೆ ಹೋದರು. ರಾಜನಾದವನು ಚಾತುರ್‌ವರ್ಣ ಧರ್ಮದ ರಕ್ಷಣೆ ಮಾಡಬೇಕೆಂಬುದು ಅಂದಿನ ಕಾಲದ ಕಟ್ಟಳೆ ಮಾಡಿದ್ದರು.

ಬಸವಣ್ಣನವರು ಕಲ್ಯಾಣದಲ್ಲಿ ೩೬ ವರುಷಗಳ ಕಾಲ (ನಡೆಸಿದ) ಸಮಾಜೋ-ಧಾರ್ಮಿಕ ಪರಿವರ್ತನೆಗಾಗಿ, ಪ್ರಜೆಗಳ ಕಲ್ಯಾಣಕ್ಕಾಗಿ ಶ್ರಮಿಸಿದ್ದನ್ನು ಸಮಯ-ಸಂದರ್ಭ ಸಿಕ್ಕಿದಾಗಲೆಲ್ಲ ಅವರ ವಿರುದ್ಧ ಆಗಾಗ ಬಿಜ್ಜಳನಲ್ಲಿ ಚಾಡಿ ಹೇಳುತ್ತಿದ್ದ ಕೊಂಡೆಯರು (ಚಾಡಿಕೋರರು), ಪ್ರಮುಖವಾಗಿ ಕೊಂಡೆಯ ಮಂಚಣ್ಣ, ನಾರಣಕ್ರಮಿತ, ಮುಕುಂದ ಪೆದ್ದಿ, ವಿಷ್ಣುಭಟ್ಟ, ಕೇಶವಭಟ್ಟ ಮುಂತಾದ ಸನಾತನ ಕರ್ಮಠ ಸಂಪ್ರದಾಯವಾದಿಗಳು ಈ ಅವಕಾಶ ಬಿಡಲಿಲ್ಲ. ರಾಜ ಬಿಜ್ಜಳನಿಗೆ ಇದು 'ಧರ್ಮದ್ರೋಹ' ವೆಂದು ದೂರು ಕೊಟ್ಟರು.

ಬಸವಣ್ಣನವರ ವಿರುದ್ಧ, ಅವರ ಧರ್ಮದ ಏಳ್ಗೆಯವಿರುದ್ಧ, ದಲಿತೋದ್ಧಾರ, ಅಸ್ಪೃಶ್ಯೋದ್ಧಾರ, ಸ್ತ್ರೀಕುಲೋದ್ಧಾರ, ಕುರಿತು, ಸಹಭೋಜನ-ದಾಸೋಹ ಕುರಿತು, ಹೊರಕೇರಿಗಳೆಲ್ಲ ಹರನಕೇರಿಗಳಾದ ಕುರಿತು ಒಳಗೊಳಗೆ ಅಸಹನೆ, ಮತ್ಸರ ಪಟ್ಟು, ರಾಜನಲ್ಲಿ ದೂರು ಕೊಡುತ್ತಲೇ ಇದ್ದರು. ಬಸವಣ್ಣನವರು ಹೊಲೆಯರ ಶಿವನಾಗಮಯ್ಯನ ಕೇರಿಗೆ-ಮನೆಗೆ ಹೋಗಿ ಉಂಡು ಬಂದದ್ದು, ಮಾದಾರ ಚೆನ್ನಯ್ಯನ ಮನೆಯಲ್ಲಿ ಅಂಬಲಿಪ್ರಸಾದ ಸ್ವೀಕರಿಸಿದ್ದು. ಸಮಗಾರ ಹರಳಯ್ಯನ ಮನೆಯಲ್ಲಿ ಪ್ರಸಾದ ಮಾಡಿದ್ದು, ಅಂದಿನ ಕಾಲದ ವೇಶ್ಯಾಪದ್ಧತಿ ನಿಲ್ಲಿಸಿದ್ದು, ದೇವದಾಸಿ ಪದ್ಧತಿ ತೊಡೆದು ಹಾಕಿದ್ದು, ಅಸ್ಪೃಶ್ಯತಾ ನಿವಾರಣೆ ಮಾಡಿದ್ದು. ಸ್ತ್ರೀಯರಿಗೆ-ಶೂದ್ರಾತಿ ಶೂದ್ರರಿಗೆ ಧಾರ್ಮಿಕ ಸಂಸ್ಕಾರ ನೀಡಿದ್ದು, ದೇವಾಲಯ ಸಂಸ್ಕೃತಿ-ಪೂಜಾರಿ-ಪುರೋಹಿತ ಸಂಸ್ಕೃತಿ ನಿರಾಕರಿಸಿದ್ದು, ಅಸ್ಪೃಶ್ಯ-ದಲಿತರನ್ನೆಲ್ಲ ಅಪ್ಪಾ-ಬೊಪ್ಪಾ ಎಂದು ಅಪ್ಪಿಕೊಂಡದ್ದು, ಅನುಭವ ಮಂಟಪದ ಅಧ್ಯಕ್ಷನನ್ನಾಗಿ ಶೂದ್ರ (ನಟವರ ಜಾತಿಯ) ಜನಾಂಗದ ಅಲ್ಲಮಪ್ರಭುದೇವರನ್ನು ಮಾಡಿದ್ದು, ಕುಲ ಹದಿನೆಂಟು ಜಾತಿಗಳವರು ಒಂದು ಧರ್ಮೀಯರಾದದ್ದು, ಬಹುದೇವೋಪಾಸನೆ ತೊರೆದು ಇಷ್ಟಲಿಂಗದ ಉಪಾಸಕರಾದದ್ದು, ಮೇಲ್ಜಾತಿಯವರು ಊಳಿಗಮಾನ್ಯ ಗುಲಾಮಗಿರಿ ತೊರೆದು, ಸ್ವಾವಲಂಬನೆಯ ಕಾಯಕ ಜೀವಿಗಳಾದದ್ದು, ಎಲ್ಲರೂ ವಿದ್ಯೆಕಲಿತು ಜ್ಞಾನಿಗಳಾದದ್ದು, ಇವೆಲ್ಲ ಸಂಪ್ರದಾಯ ಕರ್ಮಠರಿಗೆ ನುಂಗಲಾರದ ಬಿಸಿ ತುಪ್ಪದಂತಾಗಿತ್ತು.

ಅನುಭವ ಮಂಟಪದಲ್ಲಿ ನಡೆದ ಶೀಲವಂತಯ್ಯ-ಲಾವಣ್ಯರ ಕಲ್ಯಾಣ ಮಹೋತ್ಸವವು-ಶರಣರಿಗೆ ಮಾನವತೆಯ ಮಹಾಸಿದ್ಧಿಯಾಗಿ ಕಂಡಿತು.

ಅಗ್ರಜ ಅಂತ್ಯಜ ವರ್ಣಧರ್ಮದ ಎರಡು ಧ್ರುವಗಳು
ಒಂದು ಉತ್ತರ, ಇನ್ನೊಂದು ದಕ್ಷಿಣ
ನಡುವೆ ದೊಡ್ಡ ಕಮರಿ
ಸಮತೆಯ ಗಾಳಿ ಬೀಸಿ
ಶಿವಭಕ್ತಿ ಸೂತ್ರ ಬಂಧಿಸಿತ್ತು ಇವೆರಡನ್ನು !
ಅಗ್ರಜನ ಪುತ್ರಿ ಅಂತ್ಯಜನ ಪುತ್ರನ ಕೈಹಿಡಿದಳು
ಸಾಧಿಸಿತ್ತು ಮಾನವತೆಯ ಮಹಾಸಿದ್ಧಿ ಶರಣರಲ್ಲಿ
ನಿಃಕಳಂಕ ಮಲ್ಲಿಕಾರ್ಜುನಾ
ನೋಡಿ ಬೆರಗಾದೆ ನಾನು.

ಎಂದು ಕಾಯಕವೀರ ಮೋಳಿಗೆಯ ಮಾರಯ್ಯ (ಕಾಶ್ಮೀರದ ಮಹಾರಾಜ ಮಹಾದೇವ ಭೂಪಾಲ)ನವರು ತಮ್ಮ ವಚನದಲ್ಲಿ ವರ್ಣಿಸಿರುವುದನ್ನು ಕಾಣುತ್ತೇವೆ.

### iv) ಹರಳಯ್ಯ ಮಧುವರಸರಿಗೆ ಎಳೆಹೂಟೆ ಶಿಕ್ಷೆ : ಬಸವಣ್ಣನವರಿಗೆ ಗಡಿಪಾರು ಆಜ್ಞೆ:

ಬಸವಾದಿ ಶರಣರ ಈ ಮಾನವತೆಯ ಮಹಾಸಿದ್ಧಿಯು, ಮಾನವಕುಲದ ಏಕತೆಯ ಘಟನೆಯು ಜಾತಿವಾದಿ ಕರ್ಮಠ ಮೂಲಭೂತವಾದಿಗಳಿಗೆ ಸಹಿಸಲಸಾಧ್ಯವಾದ ಪೆಟ್ಟಾಗಿತ್ತು. ಅವರೆಲ್ಲ ಒಟ್ಟಾಗಿ ಬಿಜ್ಜಳನ ಕಿವಿಯೂದಿ, "ಕಲ್ಯಾಣದ ಶರಣ ಗಣ, ಶರಣಸೈನ್ಯ ನಿಮ್ಮನ್ನು ಸಿಂಹಾಸನದಿಂದ ಕೆಳಗಿಳಿಸಿ, ತಮ್ಮ ಗುರುವಾಗಿರುವ ಬಸವಣ್ಣನವರನ್ನು ಬಸವರಾಜ, ಬಸವರಸ' ನನ್ನಾಗಿ ಮಾಡಲಿದ್ದಾರೆ" ಎಂದೂ ಇದು ಶರಣರು ನಡೆಸಿರುವ ಪಿತೂರಿ' ಎಂದೂ ಬಿಂಬಿಸಿದರು. ಹಿತ್ತಾಳೆ ಕಿವಿಯ ಬಿಜ್ಜಳ ಭಯಪಟ್ಟು, ಜಾತಿವಾದಿಗಳ ಕುತಂತ್ರಕ್ಕೆ ಒಳಗಾಗಿ, ಹರಳಯ್ಯ ಮಧುವರಸನ್ನು ಹಿಡಿದು ತರಸಿ, ವಿಚಾರಣೆಯ ನಾಟಕಮಾಡಿ, ಅವರಿಗೆ 'ಕಣ್ಣು ಕೀಳಿಸಿ ಎಳೆಹೊಟೆ ಶಿಕ್ಷೆ'ಗೆ ಆಜ್ಞೆ ಮಾಡಿದನು.

ಬಸವಣ್ಣನವರು ರಾಜನ ಒಡ್ಡೋಲಗದಲ್ಲಿ ಈ ಕುರಿತು ಎಷ್ಟೇ ವಾದ ಮಂಡಿಸಿ ರಾಜನನ್ನು ಮನಗಾಣಿಸಲು ಯತ್ನಿಸಿದರೂ, ಕೊಂಡೆಯರ ಕುತಂತ್ರಕ್ಕೆ ಒಳಗಾಗಿದ್ದ ರಾಜ ಬಿಜ್ಜಳನು ಬಸವಣ್ಣನವರ ವಿಚಾರಗಳಿಗೆ ಒಪ್ಪಲಿಲ್ಲ. ಹರಳಯ್ಯ ಮಧುವರಸ ಶರಣರಿಗೆ ಎಳೆಹೊಟೆ ಶಿಕ್ಷೆಯ ರಾಜಾಜ್ಞೆ ಕೇಳಿದ ತಕ್ಷಣ ಬಸವಣ್ಣನವರು ಪ್ರಧಾನಿ ಹುದ್ದೆ ತ್ಯಜಿಸಿ ಅದರ ಚಿಹ್ನೆಗಳಾದ ಕಿರೀಟ, ಖಡ್ಗ, ಮುದ್ರೆಯುಂಗುರ ರಾಜನ ಮುಂದಿಟ್ಟು, ಒಡ್ಡೋಲಗದಿಂದ ಹೊರನಡೆದರು. ರಾಜ ಬಿಜ್ಜಳ ಇದನ್ನು

ನಿರೀಕ್ಷಿಸಿರಲಿಲ್ಲ, ದಿಗ್ ಭ್ರಮೆಗೊಳಗಾಗಿ ಬಿಟ್ಟ. ಇದೇ ಸಮಯಾವಕಾಶ ದುರುಪಯೋಗಪಡಿಸಿಕೊಂಡು ಕೊಂಡೆಯರು "ಸೂರ್ಯೋದಯದೊಳಗಾಗಿ ಬಸವಣ್ಣನವರಿಗೆ ಕಲ್ಯಾಣದಿಂದ **'ಗಡಿಪಾರು ಆಜ್ಞೆ'**ಯ ಫರ್ಮಾನಿಗೆ ರಾಜಮುದ್ರೆ ಒತ್ತಿಸಿ, ಜಾರಿ ಮಾಡಿಸಿಬಿಟ್ಟರು.

'ಅರಸು ಮುನಿದರೆ ನಾಡೊಳಗಿರಲಾಗದಯ್ಯ' ಎಂದು ನಿರ್ಧರಿಸಿದ ಬಸವಣ್ಣನವರು ಸಮಸ್ತ ಶರಣ ಸಂಕುಳಕ್ಕೆಲ್ಲ ಸಮಾಧಾನ ಹೇಳಿ 'ಕಲ್ಯಾಣದ ಪುಣ್ಯವೇ ಬಸವರೂಪದಿಂದ ಹೊರಹೋಗುವಂತೆ ಅಂದು ರಾತ್ರಿಯೇ ಕಲ್ಯಾಣ ತೊರೆದು ಶರಣ ಹಡಪದ ಅಪ್ಪಣ್ಣನವರೊಂದಿಗೆ ಕಪ್ಪಡಿ ಸಂಗಮದೆಡೆಗೆ ಹೊರಟರು. ಮರುದಿನ ರಾಜಾಜ್ಞೆಯನ್ನು (ಪ್ರಧಾನಿ ಹುದ್ದೆ ಸ್ವೀಕರಿಸಿದ್ದ ಕೊಂಡೆಯ ಮಂಚಣ್ಣ ಮಂತ್ರಿ ಹಾಗೂ ಆತನ ಕೊಂಡೆಯರು) ಜಾರಿಗೊಳಿಸಿ-ಶರಣ ಹರಳಯ್ಯ-ಮಧುವರಸರಿಗೆ ಕಣ್ಣು ಕೀಳಿಸಿ, ಎಳೆಹೊಟೆ ಶಿಕ್ಷೆ ಜಾರಿ ಮಾಡಿ (ಆನೆಯ ಕಾಲಿಗೆ ಇಬ್ಬರನ್ನು ಸರಪಳಿಯಿಂದ ಬಿಗಿದು) ಪಟ್ಟಣದ ಹೊರವಲಯದ ಕಲ್ಲು-ಮುಳ್ಳು ತುಂಬಿದ್ದ ಗುಡ್ಡ ಪ್ರದೇಶದಲ್ಲಿ ಆನೆಯನ್ನು ಓಡಿಸಿದರು. ಇಬ್ಬರೂ ಶರಣರು ಬಸವಧರ್ಮ-ತತ್ವ-ಸಿದ್ಧಾಂತಗಳಿಗಾಗಿ ಬಲಿಯಾದರು, ಹುತಾತ್ಮರಾದರು.

ಜೊಳವಾಳಿಯಾನಲ್ಲ, ವೇಳೆವಾಳಿ ನಾನಯ್ಯ
ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯಾ
ಕೇಳು ಕೂಡಲಸಂಗಮದೇವಾ
ಮರಣವೇ ಮಹಾನವಮಿ.

ಎಂಬ ಬಸವಗುರುವಾಣಿಯಂತೆ ವೇಳೆವಾಳಿ (ತತ್ವಕ್ಕಾಗಿ ಪ್ರಾಣಾರ್ಪಣೆ ಮಾಡುವ ಧೀರರಾಗಿ)ಯಾಗಿ **ಮರಣವನ್ನು ಮಹಾನವಮಿ** ಹಬ್ಬವಾಗಿ ಸ್ವೀಕರಿಸಿ, **ಕಲ್ಯಾಣ ಕ್ರಾಂತಿಯಲ್ಲಿ ಹುತಾತ್ಮರಾದರು.** ಮರುದಿನದ ಸೂರ್ಯೋದಯಕ್ಕೆ ಕಲ್ಯಾಣ ಕ್ರಾಂತಿಯನ್ನು ಬಸವತತ್ವದ ವಿಜಯೋತ್ಸವ (ವಿಜಯದಶಮಿ) ಆಗುವಂತೆ ಮಾಡಿದರು.

ಶರಣ ಹರಳಯ್ಯ-ಮಧುವರಸರು ಬಲಿದಾನವಾದುದನ್ನು ಅರಿತ ಪ್ರಜೆಗಳು ದಂಗೆ ಎದ್ದರು. ತರುಣರಾದ ಜಗದೇವ-ಮಲ್ಲಿಬೊಮ್ಮರು ರಾಜ ಬಿಜ್ಜಳನ ವಧೆ ಮಾಡಿದರು. ಈ ಹತ್ಯೆಯ ಆರೋಪವನ್ನು ಬಸವಧರ್ಮ ವಿರೋಧಿಗಳು ಶರಣರ ಮೇಲೆ ಹೊರಿಸಿ, ಸುದ್ದಿ ಹಬ್ಬಿಸಿದರು. ಬಿಜ್ಜಳನ ಮಗ ರಾಯ ಮುರಾರಿ ಸೋವಿದೇವನಿಗೆ ಪಟ್ಟಗಟ್ಟಿ, ಆತನನ್ನು ತಮ್ಮಂತೆ ಮಾಡಿಕೊಂಡು, ಶರಣರ-ಪ್ರಜೆಗಳ ಕ್ರಾಂತಿಯನ್ನು ಹತ್ತಿಕ್ಕಲು ಸೈನ್ಯಕ್ಕೆ ಆದೇಶ ಮಾಡಿಸಿದರು.

### v) ವಚನ ವಾಙ್ಮಯ ಉಳಿವಿಗಾಗಿ ಹೋರಾಟ :

ಕ್ರಾಂತಿಗಂಗೋತ್ರಿ ಅಕ್ಕನಾಗಮ್ಮತಾಯಿ, ಗಂಗಾಂಬಿಕೆ, ಚೆನ್ನಬಸವಣ್ಣ, ವೀರಗಣಾಚಾರಿಗಳಾದ ಮಡಿವಾಳ ಮಾಚಿದೇವ, ಮೋಳಿಗೆ ಮಾರಯ್ಯ, ಕಿನ್ನರಿ ಬೊಮ್ಮಯ್ಯ, ಡೋಹರ ಕಕ್ಕಯ್ಯ, ಸೊಡ್ಡಳ ಬಾಚರಸ, ಘನಲಿಂಗಿರುದ್ರಮುನಿ ಮುಂತಾದವರ ನೇತೃತ್ವದಲ್ಲಿ ನೂರಾರು ಶರಣರು, ಚರಜಂಗಮರು ಅಪಾರವಾದ ವಚನ ತಾಡೋಲೆ ಕಟ್ಟುಗಳನ್ನು ಎತ್ತಿನ ಬಂಡಿಗಳಲ್ಲಿ, ಕುದುರೆ ರಥಗಳಲ್ಲಿ ಹೇರಿಕೊಂಡು ಅವುಗಳ ರಕ್ಷಣೆಗಾಗಿ ಖಡ್ಗ ಹಿಡಿದು ಕಲ್ಯಾಣ ತೊರೆದು ಪಶ್ಚಿಮ ಘಟ್ಟಗಳ ಘೋರಾರಣ್ಯದ ಕಡೆಗೆ ಸಾಗಿದರು. ಸೋವಿದೇವನ ಆಜ್ಞೆಯಂತೆ ಸೈನ್ಯವು ಶರಣರ ಬೆನ್ನು ಹತ್ತಿತು. ಕಲ್ಯಾಣದಿಂದ ಸೊನ್ನಲಿಗೆ ಮಾರ್ಗ, ಕಲ್ಯಾಣದಿಂದ ಕಲಬುರ್ಗಿ ಮಾರ್ಗವಿಡಿದು ಗುಂಪುಗಳಾಗಿ ಶರಣರು ಹೊರಟರು. ಶರಣ ಸಿದ್ಧರಾಮೇಶ್ವರರ ಸೊನ್ನಲಿಗೆಯ ಶಿಷ್ಯರಾದ ವಡ್ಡರು, ಗುಡ್ಡರು ಆಯುಧಗಳನ್ನು ಹಿಡಿದು ಸೈನ್ಯವನ್ನು ತಡೆದು, ಶರಣರು ಪಾರಾಗುವಂತೆ ಪ್ರಯತ್ನಿಸಿದರು. ಶರಣರು ತರ್ದವಾಡು ಪ್ರಾಂತದಲ್ಲಿ ಹಾದು ಗೊಡಚಿ, ಮುರಗೋಡ, ಕಾದರವಳ್ಳಿ, ತಿಗಡಿ, ಲಿಂಗನಮಠ ಮೂಲಕ ಸೈನ್ಯದೊಂದಿಗೆ ಕಾದುತ್ತಾ, ಮುಂದೆ ಉಳವಿಯ ಘೋರಾರಣ್ಯದಲ್ಲಿ ಪ್ರವೇಶಿಸಿ ಅಲ್ಲಿಯ ಹೊಳೆಯ ದಡದಲ್ಲಿ ವಿಶಾಲವಾದ ಅದ್ಭುತ ಗುಹೆಯೊಂದು ನಿರ್ಮಾಣ ಮಾಡಿ, ಮಹಾಮನೆ ಕಟ್ಟಿ ಉಳಿದರು. ಕಾದರವಳ್ಳಿಯಲ್ಲಿ ಸೈನ್ಯ ಸೋತು ಹಿಂದಿರುಗಿ ಹೋದದ್ದರಿಂದ, ಶರಣರು ಅಲ್ಲಲ್ಲಿ ಉಳಿದು, ಮಹಾಲಿಂಗದೊಳು  ಬಯಲಾದರು. ಕಕ್ಕಯ್ಯ ಶರಣರು ಕಕ್ಕೇರಿಯಲ್ಲಿ ಹುತಾತ್ಮರಾದರು. ಶರಣೆ ಕಲ್ಯಾಣಮ್ಮ ತಿಗಡಿಯಲ್ಲಿ ಲಿಂಗೈಕ್ಯರಾದರು. ಮಾಚಿದೇವರು ದೇವರಹಿಪ್ಪರಗಿಗೆ ಬಂದು ಉಳಿದರು, ಗೊಲ್ಲಾಳೇಶ್ವರರು, ಗೊಲಗೇರಿಗೆ ಬಂದರು. ಚೆನ್ನಬಸವಣ್ಣ, ನಾಗಮ್ಮನವರು ಉಳವಿಯಲ್ಲಿ ನೆಲೆ ನಿಂತರು.

ಅಲ್ಲಮ ಪ್ರಭುಗಳು, ಅಕ್ಕಮಹಾದೇವಿ ಮುಂತಾದ ಶರಣರ ಒಂದು ಗುಂಪು ಶ್ರೀಶೈಲದ ಕದಳಿವನದೆಡೆಗೆ ಸಾಗಿಹೋದರು. ದೂರ ದೂರದ ನಾಡುಗಳಿಂದ ಆಗಮಿಸಿದ್ದ ಶರಣರು ಕಲ್ಯಾಣದಿಂದ ತಮ್ಮ ತಮ್ಮ ನಾಡುಗಳಿಗೆ ಮರಳಿ ಹೋದರು. ಶರಣರು ಭೌತಿಕವಾಗಿ ಇಂದು ಇಲ್ಲದಿದ್ದರೂ, ವಚನ ವಾಙ್ಮಯ ರೂಪದಲ್ಲಿ ಉಳಿದು ಮಾನವ ಕುಲಕ್ಕೆ ಬೆಳಕಾಗಿದ್ದಾರೆ.

### vi) ಕಪ್ಪಡಿ ಸಂಗಮದಲ್ಲಿಂದ ಬಸವಣ್ಣನವರು ಕಲ್ಯಾಣಕ್ಕೆ ನಿರೂಪ ಕಳಿಸಿದ್ದು :

ಇತ್ತ ಬಸವಣ್ಣನವರು ಹರಳಯ್ಯ-ಮಧುವರಸರಿಗೆ ಎಳೆಹೊಟಿ ಶಿಕ್ಷೆಯಾದುದನ್ನು ಚರಜಂಗಮರ ಮೂಲಕ ಅರಿತರು. ಅಪ್ಪಣ್ಣ ಶರಣರನ್ನು ಕಲ್ಯಾಣಕ್ಕೆ ಕಳಿಸಿ ಎಲ್ಲ ಶರಣ-ಶರಣೆಯರು ಕಲ್ಯಾಣದಿಂದ ಸುರಕ್ಷಿತವಾದ ಸ್ಥಳಗಳಿಗೆ

ಹೋಗಬೇಕೆಂದು ನಿರೂಪ ಕಳಿಸಿದರು. ಮಹಾಮನೆಯಲ್ಲಿಯೇ ಉಳಿದಿದ್ದ ನೀಲಾಂಬಿಕೆಯವರನ್ನು ಕರೆತರಲು ಅಪ್ಪಣ್ಣನವರಿಗೆ ತಿಳಿಸಿದ್ದರು.

ನೀಲಾಂಬಿಕೆ ತಾಯಿಯು ಇಷ್ಟಲಿಂಗ ಪೂಜೆಯಲ್ಲಿ ನಿರತರಾಗಿ ಸ್ವರ ವಚನವೊಂದು ರಚಿಸಿ ಹಾಡಿದರು.

ನೋಡು, ನೋಡು, ನೋಡು, ನೋಡು, ನೋಡು, ಲಿಂಗವೇ ।
ನೋಡು ಬಸವಣ್ಣನವರು ಮಾಡಿದಾಟವ ॥ಪ॥

ಹರಳಯ್ಯ ಮಧುವಯ್ಯನವರಿಗೆ ಎಳೆಹೂಟಿ
ದೊರೆಯು ಬಿಜ್ಜಳನು ಕಟ್ಟಿದನೆಂದರೆ
ಇರಬಾರದಲ್ಲೀಗ ಶರಣರಿಗರುಹಿರೆಂ
ದರಸು ಬಸವರಾಜ ಪೇಳ್ದನಂತೆ ॥೧॥

ನುಡಿಯ ಲಾಲಿಸು ಬೇಗ ಕೆಡುವುದೀ ಕಲ್ಯಾಣ
ಒಡೆಯ ಸಂಗಮನೋಳು ಬೆರೆವನಂತೆ
ತಡ ಮಾಡಬೇಡಿರಿ ಮಡದಿಯರಿಗರುಹಿರೆಂದು
ಒಡೆಯ ಬಸವರಾಜ ನುಡಿದನಂತೆ ॥೨॥

ಅಲ್ಲಿಗೆಮ್ಮನ್ನು ಬರಲು ಹೇಳಿದರಂತೆ
ಅಲ್ಲಿರ್ಪ ಸಂಗಯ್ಯನಿಲ್ಲಿಲ್ಲವೆ ?
ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು
ಬಲ್ಲ ಮಹಾತ್ಮರಿಗಿದು ತರವೆ ? ॥೩॥

ಅಪ್ಪಣ್ಣಯ್ಯಗಳು ಕರೆಯ ಬಂದಿಹರು
ಕಪ್ಪಡಿ ಸಂಗಮನಾಥ ಕೇಳೋ ।
ಪುಷ್ಪಕ್ಕೆ ಪರಿಮಳ ಬೆರೆದಂತೆ ಎನ್ನ
ನಪ್ಪಿದೆ ಲಿಂಗವೇ ಮಾತನಾಡೋ ॥೪॥

ಸಂಗನಬಸವನ ನಿರೂಪವ ತಾಳುತೆ
ಹಿಂಗದೆ ಕರವೆತ್ತಿ ನಮಿಸುತಲಿ
ಸಂಗನ ಬಸವಯ್ಯನಾತನೆ ಈತನೆ
ನ್ನಂಗಯ್ಯ ಲಿಂಗದೊಳಡಗುವೆನು ॥೫॥

ಅಪ್ಪಣ್ಣ ಶರಣರು ನೀಲಾಂಬಿಕೆ ತಾಯಿಯವರಿಗೆ ಕಲ್ಯಾಣದ ಪರಿಸ್ಥಿತಿಯನ್ನು ಅರ್ಥಮಾಡಿಸಿಕೊಟ್ಟು, ಒಂದು ರಥದ ಏರ್ಪಾಟು ಮಾಡಿ, ನೀಲಾಂಬಿಕೆಯವರನ್ನು ಹಾಗೂ ಅವರ ಜೊತೆಯಲ್ಲಿದ್ದ ಲಿಂಗಮ್ಮನವರನ್ನು ಕರೆದುಕೊಂಡು ಸಂಗಮಕ್ಕೆ ಹೊರಟರು.

**vii) ಬಸವಣ್ಣನವರು ಮಹಾಲಿಂಗದೊಳು ಬಯಲಾದುದು (ಕ್ರಿ.ಶ.೧೧೬೭) :**

ಅಯ್ಯಾ ಭಕ್ತಿಗೆ ಬೀಡಾದುದು ಕಲ್ಯಾಣ ಮೂವತ್ತಾರು ವರುಷ
ಅಯ್ಯಾ ಅನುಭವಕ್ಕೆ ಶಿವಸದನವಾದುದು ಇಪ್ಪತ್ತೇಳು ವರುಷ
ಅಯ್ಯಾ ಹಿಂದಿನಂತನುಭವ, ಹಿಂದಿನಂತೆ ಭಕ್ತಿಯಿಲ್ಲ
ಮೂರು ಮಾಸದೊಳಗಾಗಿ
ಇಲ್ಲಿ ಆಡಲುಭಯವಿಲ್ಲ ಕೇಳಯ್ಯಾ
ಕೂಡಲಸಂಗಮದೇವಯ್ಯಾ

ಬಿತ್ತಿತ್ತು ಬೆಳೆಯಿತ್ತು, ಕೆಯ್ಯ ಕೊಯ್ಯಿತ್ತು
ಗೂಡು ಮುರಿಯಿತ್ತು, ಕುತ್ತರಿಯೊಟ್ಟಿತ್ತು
ಒಕ್ಕಿತ್ತು ತೂರಿತ್ತು ಅಳೆಯಿತ್ತು ಸಲಗೆ ತುಂಬಿತ್ತು
ಕೂಡಲಸಂಗಮದೇವಯ್ಯಾ
ಮೇಟಿ ಕಿತ್ತಿತ್ತು, ಕಣ ಹಾಳಾಯಿತ್ತು

ಬಸವಣ್ಣನವರು ಕಲ್ಯಾಣಕ್ಕೆ ಬಂದು ಮೂವತ್ತಾರು ವರುಷಗಳ ಕಾಲ (ಕ್ರಿ.ಶ.೧೧೩೧–೧೧೬೭) ಕಲ್ಯಾಣವು ಭಕ್ತಿಯ ಬೀಡಾಗಿತ್ತು. ಅದರಲ್ಲಿ ಪ್ರಾರಂಭದ ಒಂಭತ್ತು ವರುಷಗಳು ರಾಜ್ಯದ ಅಭಿವೃದ್ಧಿ, ಪ್ರಜೆಗಳಿಗಾಗಿ ನೂರಾರು ಕಾಯಕದ ಯೋಜನೆಗಳು, ಅವರಿಗಾಗಿ ಪ್ರತಿ ಗ್ರಾಮಗಳಲ್ಲಿ ಶಿವಪಂಚಾಯತಗಳು ಅಂದರೆ ಅನ್ನ, ಅರಿವೆ, ಆಶ್ರಯ, ಅರಿವು, ಔಷಧಗಳು ದೊರೆಯುವಂತೆ ವ್ಯವಸ್ಥೆ ಕಲ್ಪಿಸಲು ರಾಜಭಂಡಾರದ ಸಂಪತ್ತಿನ ಸದ್ಬಳಕೆ, ಅನಂತರ ರಾಜಬೊಕ್ಕಸಕ್ಕೆ ನಿರಂತರವಾಗಿ ಹರಿದು ಬರುವ ಆದಾಯ, ಸಾಮ್ರಾಜ್ಯದ ಎಲ್ಲ ಮಾಂಡಲಿಕರಲ್ಲಿ ಸೌಹಾರ್ದತೆ ವಿಶ್ವಾಸ, ಸೈನ್ಯದ ವ್ಯವಸ್ಥೆ, ಶೋಷಣಾ ರಹಿತ ಆಡಳಿತಕ್ಕೆ ಹೆಚ್ಚಿನ ಗಮನ ಕೊಟ್ಟಿದ್ದರು. ಜೊತೆ ಜೊತೆಗೆ ಅನುಭವ ಗೋಷ್ಠಿಗಳು, ಮಹಾಮನೆ ಕಾರ್ಯಕ್ರಮಗಳು ನಿರಂತರವಾಗಿ ಮುಂದುವರೆದಿದ್ದವು.

ಅನುಭವ ಮಂಟಪ ಸ್ಥಾಪನೆಯಾದ ನಂತರ (೧೧೪೦ ಕ್ರಿ.ಶ) ಜಾತಿರಹಿತ ಧರ್ಮ, ಸಮಾಜ, ಸಿದ್ಧಾಂತ, ಸಂಸ್ಕೃತಿ, ಅಹಂಗ್ರಹೋಪಾಸನೆಯ ಇಷ್ಟಲಿಂಗ ಉಪಾಸನೆ, ಕಾಯಕ–ದಾಸೋಹ–ಪ್ರಸಾದ ತತ್ವಗಳ ಅನುಷ್ಠಾನ, ೭೭೦ ಶರಣ–ಶರಣೆಯರು ಅನುಭವಮಂಟಪದಲ್ಲಿ ಕೂಡಿ, ವ್ಯಷ್ಟಿ–ಸಮಷ್ಟಿಯ ಸರ್ವಾಂಗೀಣ

ಕಲ್ಯಾಣಕ್ಕಾಗಿ ನಿರಂತರ ಅನುಭವಗಳ ಚಿಂತನ-ಮಂಥನ ನಡೆಸಿದ್ದು, ಅಪಾರವಾದ ವಚನ ವಾಙ್ಮಯ ರಚನೆಯಾಗಿದ್ದು. ಚರಜಂಗಮ ಶರಣರಿಂದ ರಾಜ್ಯ-ಹೊರರಾಜ್ಯಗಳಲ್ಲಿ ಪ್ರಸಾರವಾದದ್ದು, ಕಾಯಕ-ಕಲೆ-ಉಪಾಸನೆಗಳು ಬೆಳೆದು ಜನ ನೆಮ್ಮದಿಯ ಜೀವನ ಸಾಗಿಸುವಂತಾದುದು, ಕೊನೆಗೆ ಕರ್ಮಠ ಸಂಪ್ರದಾಯವಾದಿಗಳ ಸ್ವಾರ್ಥ-ಕುತಂತ್ರದಿಂದಾಗಿ ಕಲ್ಯಾಣದಲ್ಲಿ ಜರುಗಿದ ದುರ್ಘಟನೆಗಳು, ಹರಳಯ್ಯ-ಮಧುವರಸರಿಗೆ ಎಳೆಹೂಟೆ ಶಿಕ್ಷೆ, ತಾವು ಪ್ರಧಾನಿ ಹುದ್ದೆ ತ್ಯಜಿಸುವಂತಾದದ್ದು, ರಾಜ್ಯಾಧಿಕಾರಕ್ಕಾಗಿ ನಡೆದ ಸಂಚುಗಳು, ರಾಜ ಬಿಜ್ಜಳನ ಹತ್ಯೆ, ಶರಣರ ಮೇಲೆ ಅಪವಾದ ಹೊರಿಸಿದ್ದು, ಶರಣರನ್ನು ಕೊಲ್ಲಲು ಸೈನ್ಯದ ದುರುಪಯೋಗ, ವಚನ ವಾಙ್ಮಯ ನಾಶಕ್ಕೆ ನಡೆದ ಕುತಂತ್ರಗಳು, ಕೊನೆಗೆ ಶರಣರು ದಿಕ್ಕು-ದಿಕ್ಕುಗಳಿಗೆ ಚದುರಿಹೋದದ್ದು, ಬಹಳಷ್ಟು ಶರಣರ ಬಲಿದಾನ, ಭಕ್ತಿಯ ಸಾಮ್ರಾಜ್ಯವಾಗಿದ್ದ ಕಲ್ಯಾಣ, ರಕ್ತದೋಕುಳಿಯಿಂದಾಗಿ ಕಟುಕರ ಕೇರಿಯಂತಾದುದು, ಅನುಭವ ಮಂಟಪ, ಮಹಾಮನೆ, ಶರಣರ ಮನೆ, ಕುಟೀರಗಳನ್ನು ನಾಶಪಡಿಸಿದ ವಿರೋಧಿಗಳ ಅಟ್ಟಹಾಸ ಎಲ್ಲವೂ ಮೂರು ಮಾಸದೊಳಗೆ ಘಟಿಸಿದ್ದವು. ಮೂವತ್ತಾರು ವರುಷಗಳ ಕಾಲ ಮಾನವ ಕುಲದ ಕಲ್ಯಾಣ, ಸಕಲಜೀವಾತ್ಮರ ಲೇಸಿಗಾಗಿ ಕಟ್ಟಿದ ಕಲ್ಯಾಣದ ಭಕ್ತಿ ಸಾಮ್ರಾಜ್ಯ ಸರ್ವನಾಶವಾಗಿ, ಪತನಗೊಂಡಿತ್ತು.

'ಸಾಕು ಮಾಡೈ ತಂದೆ ಲೋಕದಾಟವನಿನ್ನು; ಎಂದು ನಿರ್ಧರಿಸಿದ ಬಸವಣ್ಣನವರು ತಮ್ಮ ಮಹಾಮಣಿಹ ಪೂರೈಸಿತ್ತೆಂದು ಅಂತಿಮ ನಿರ್ಧಾರ ಕೈಕೊಂಡರು.

ಕರ್ತನಟ್ಟಿದಡೆ ಮರ್ತ್ಯದಲ್ಲಿ ಮಹಾಮನೆಯ ಕಟ್ಟಿದೆ
ಸತ್ಯ ಶರಣರಿಗೆ ತೊತ್ತು ಭೃತ್ಯನಾಗಿ ಸವೆದು ಬದುಕಿದೆ
ಕರ್ತನ ಬೆಸನು ಮತ್ತೆ ಬರಲೆಂದಟ್ಟಿದಡೆ
ಕೂಡಲಸಂಗಮದೇವರ ನಿರೂಪಕ್ಕೆ ಮಹಾಪ್ರಸಾದವೆಂದೆನು.

ಎಂದು ಇಷ್ಟಲಿಂಗವ ಅನಿಮಿಷ ದೃಷ್ಟಿಯಿಂದ ನೋಡುತ್ತಾ, ನೋಡುತ್ತಾ ಜಗದಗಲ ಮುಗಿಲಗಲ ಮಿಗೆಯಗಲವಾಗಿರುವ ಮಹಾಲಿಂಗದ ಮಹಾಬೆಳಕಿನ ಮಹಾಬಯಲೊಳಗೆ ಬಯಲಾದರು. ಅಂಗಚೈತನ್ಯ ಚಿಲ್ಲಿಂಗ ಚಿದ್ಬೆಳಕು, ಲಿಂಗಚೈತನ್ಯ ಮಹಾಲಿಂಗದ ಮಹಾಬೆಳಕಿನಲ್ಲಿ 'ಕೂಡಲು ಸಂಗಮದೇವ' ವಾಯಿತು. ಅಂದಿನಿಂದ ಕಪ್ಪಡಿ ಸಂಗಮ ಕ್ಷೇತ್ರವು ಕೂಡಲಸಂಗಮ ವೆಂಬ ಅವಿಮುಕ್ತ ಕ್ಷೇತ್ರವಾಗಿ, ಧರ್ಮಕ್ಷೇತ್ರವಾಯಿತು.

### viii) ನೀಲಾಂಬಿಕೆ–ಅಪ್ಪಣ್ಣ ಲಿಂಗಮ್ಮರು ಬಯಲಾದುದು :

ಕಪ್ಪಡಿ ಸಂಗಮದಲ್ಲಿ ಕೃಷ್ಣಾ–ಮಲಾಪಹಾರಿ ನದಿಗಳ ಈಚೆಯ ದಡದಲ್ಲಿ ಬಸವಣ್ಣನವರು ಬಯಲಾದುದನ್ನರಿತ ನೀಲಾಂಬಿಕೆ ತಾಯಿಯವರು ಇಷ್ಟಲಿಂಗ ಪೂಜೆಯಲ್ಲಿ ನಿರತವಾಗಿ, ಆಚೆಯ ದಡದಲ್ಲಿ (ತಂಗಡಗಿಯಲ್ಲಿ) ಬಯಲಾದರು.

ಎಲೆ ಅಯ್ಯಾ ಬಸವಾ, ಕರಸ್ಥಲ ಬಯಲಾಯಿತ್ತೆನಗೆ
ಕರಸ್ಥಲ ಮನಸ್ಥಲವಾಯಿತ್ತು ಬಸವಾ
ಸಂಗಯ್ಯ, ಬಸವ ಹೋದನತ್ತ
ನಾನಡಗಿದೆನಯ್ಯಾ ನಿನ್ನತ್ತ

ಬಸವಾ ಬಸವಾ ಬಸವಾ ಎಂಬ ಶಬ್ದವಡಗಿತ್ತು
ಬಸವಾ ಬಸವಾ ಬಸವಾ ಎಂಬ ರೂಪು ನಿರೂಪವಾಯಿತ್ತು.
ಬಸವನ ಕಾಯವಳಿದು ನಿರಾಕುಳವಾಗಲು
ಆನು ಬಸವಾ ಬಸವಾ ಬಸವಾ ಎಂದು
ಬಯಲಾದೆನಯ್ಯಾ ಸಂಗಯ್ಯಾ

ನೀಲಾಂಬಿಕಾ ತಾಯಿಯವರು ಮಹಾಲಿಂಗದೊಳು ಬಯಲಾದುದನ್ನು ಕಂಡು, ಶರಣ ದಂಪತಿಗಳಾದ ಹಡಪದ ಅಪ್ಪಣ್ಣ–ಲಿಂಗಮ್ಮನವರು ಇಷ್ಟಲಿಂಗ ಯೋಗ ಮಾಡುತ್ತಾ ಅವರೂ ತಂಗಡಗಿ ಗ್ರಾಮದ ಕೃಷ್ಣಾ–ಮಲಾಪಹಾರಿ ನದಿಗಳ ದಡದಲ್ಲಿ ಮಹಾಲಿಂಗದೊಳು ಒಂದಾಗಿ, ಬಯಲಾದರು.

### ix) ಬಸವತತ್ವದ ಬೆಳಕು ಜಗತ್ತನ್ನು ಬೆಳಗುತ್ತಿದೆ :

ಬಸವಾದಿ ಶರಣರು ಬಿತ್ತಿದ ಬೀಜ ಇಂದು ಹುಲುಸಾಗಿ ಬೆಳೆದು ಜಗತ್ತಿಗೆ ಫಲ ನೀಡುತ್ತಿದೆ, ಅವರು ಹೊತ್ತಿಸಿದ ದೀಪವು ಇಂದು ಜಗತ್ತನ್ನು ಬೆಳಗುತ್ತಿದೆ. ಪ್ರಪಂಚದ ಎಲ್ಲ ದೇಶಗಳು ಬಸವತತ್ವವನ್ನು ಅರಿಯಲು, ಆಚರಿಸಲು ಯತ್ನಿಸುತ್ತಿವೆ. 'ಬಸವ' ಎಂಬುದು ಮಂತ್ರವಾಗಿದೆ, ಜಗದ ಕಲ್ಯಾಣದ ತಂತ್ರವಾಗಿದೆ. ಜನಪದರು ಹಾಡಿರುವಂತೆ–

ಉತ್ತಿ ಬಿತ್ತುವ ಮಂತ್ರ ಬಿತ್ತಿ ಬೆಳೆಯುವ ಮಂತ್ರ
ಸತ್ಯ ಶಿವ ಮಂತ್ರ ನಿನ್ಹೆಸರು । ಬಸವಯ್ಯ
ಮರ್ತ್ಯದೊಳು ಮಂತ್ರ ಜೀವನಕ್ಕೆ ॥

ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ
ಚೆಲ್ಲಿದನು ತಂದು ಶಿವ ಬೆಳಕ । ನಾಡೊಳಗೆ
ಸೊಲ್ಲೆತ್ತಿ ಜಗವು ಹಾಡುವದು ॥

## ೯. ಶರಣರ ವಚನಗಳಲ್ಲಿ ಬಸವಣ್ಣನವರ ವ್ಯಕ್ತಿತ್ವ :

### ಗುಹೇಶ್ವರಲಿಂಗದ ವಿಳಾಸ ಸಂಗನಬಸವಣ್ಣ

ಆಯಿತ್ತು ಬಸವಾ, ನಿನ್ನಿಂದ ಗುರುಸ್ವಾಯತವೆನಗೆ
ಆಯಿತ್ತು ಬಸವಾ, ನಿನ್ನಿಂದ ಲಿಂಗಸ್ವಾಯತವೆನಗೆ
ಆಯಿತ್ತು ಬಸವಾ, ನಿನ್ನಿಂದ ಜಂಗಮ ಸ್ವಾಯತವೆನಗೆ
ಆಯಿತ್ತು ಬಸವಾ, ನಿನ್ನಿಂದ ಪ್ರಸಾದ ಸ್ವಾಯತವೆನಗೆ
ಇಂತೀ ಚತುರ್ವಿಧವನು ಆಗುಮಾಡಿದೆಯಾಗಿ
ಗುಹೇಶ್ವರಲಿಂಗಕ್ಕೆ ವಿಳಾಸವಾದೆಯಲ್ಲೈ ಸಂಗನಬಸವಣ್ಣ

**–ಅಲ್ಲಮ ಪ್ರಭುದೇವರು**

### ಅನಿಮಿಷ ಬಸವಣ್ಣ

ಶರಣರ ಸಮತೆಯ ನಿಧಿ ಬಸವನಯ್ಯಾ
ಭಕ್ತಿಯ ಬೆಳೆಸಿರಿ ಬಸವನಯ್ಯಾ
ಮುಕ್ತಿಯ ತವನಿಧಿ ಬಸವನಯ್ಯಾ
ಸತ್ಯದ ನಿಧಿ ಬಸವನಯ್ಯಾ
ಹರಪದ ಕಮಲ ಭೃಂಗ ಬಸವನಯ್ಯಾ
ಕೂಡಲಚನ್ನಸಂಗಯ್ಯನಲ್ಲಿ
ಅನಿಮಿಷ ಬಸವಣ್ಣನಯ್ಯಾ

**– ಚೆನ್ನಬಸವಣ್ಣನವರು**

### ಬಸವಣ್ಣನೇ ಗುರು

ಪಾವನವಾದೆನು ಬಸವಣ್ಣಾ
ನಿಮ್ಮ ಪಾವನ ಮೂರ್ತಿಯ ಕಂಡು
ಪರತತ್ವವನೈದಿದೆ ಬಸವಣ್ಣಾ
ನಿಮ್ಮ ಪರಮಸೀಮೆಯ ಕಂಡು
ಪದ ನಾಲ್ಕು ಮೀರಿದೆ ಬಸವಣ್ಣಾ
ನಿಮ್ಮ ಪರುಷಪಾದವ ಕಂಡು
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿದೆ
ಬಸವಣ್ಣಾ ಬಸವಣ್ಣಾ ಬಸವಣ್ಣಾ
ನೀನು ಗುರುವಾದೆಯಾಗಿ.

**– ಸಿದ್ಧರಾಮೇಶ್ವರರು**

### ಘನಮಹಿಮ ಬಸವಣ್ಣ

ಬಸವಣ್ಣನ ನಡೆ ಪರುಷ, ನುಡಿ ಪರುಷ, ದೃಷ್ಟಿ ಪರುಷ
ಹಸ್ತ ಪರುಷ, ಮನ ಪರುಷ, ಭಾವ ಪರುಷ
ತನು, ಮನ, ಧನವ ಗುರು ಲಿಂಗ ಜಂಗಮಕ್ಕೆ
ನಿವೇದಿಸುವಾತ ಬಸವಣ್ಣನು.
ಬಸವಣ್ಣನ ನೆನೆವುದೆ ಲಿಂಗಾರ್ಚನೆಯೆನಗೆ
ಬಸವಣ್ಣನ ನೆನೆವುದೆ ಜಂಗಮಾರ್ಚನೆಯೆನಗೆ
ಬಸವಣ್ಣನ ನೆನೆವುದೆ ಪರತತ್ವ ಪರಮಕಲ್ಯಾಣವೆನಗೆ
ಕಲಿದೇವಯ್ಯಾ
ನಿಮ್ಮ ಶರಣ ಬಸವಣ್ಣನಿಂಥಾ ಘನಮಹಿಮ ನೋಡಯ್ಯಾ

**–ಮಡಿವಾಳ ಮಾಚಿದೇವರು**

### ಸಂಗನಬಸವಣ್ಣನ ಸಂತತಿ

ಗುರುನಿಷ್ಠೆ, ಲಿಂಗನಿಷ್ಠೆ, ಜಂಗಮನಿಷ್ಠೆ
ಇಂತೀ ತ್ರಿವಿಧ ನಿಷ್ಠೆಯಲ್ಲಿ ಏಕಾಂಗಲಿಂಗ ನಿಷ್ಠೆ
ವೀರ ಧೀರಂಗಲ್ಲದಾಗದು.
ಇದು ಸಂಗನಬಸವಣ್ಣನಿಂದ ಬಂದ ಸಂತತಿಗಲ್ಲದಾಗದು
ಬ್ರಹ್ಮೇಶ್ವರ ಲಿಂಗವನರಿವುದಕ್ಕೆ
ತ್ರಿಗುಣಸಂದೇಹಿಗಳಿಗೆ ವಸ್ತು ಸಂಧಿಸದು ನೋಡಾ

**– ಬಾಹೂರ ಬೊಮ್ಮಯ್ಯ**

### ಬಸವಣ್ಣನಿಂದ ಬದುಕಿತೀ ಲೋಕ

ಶೂನ್ಯ ಸನ್ನಿಹಿತವಾದಲ್ಲಿ, ಶೂನ್ಯ ಪದಾರ್ಥವಾದಲ್ಲಿ
ಶೂನ್ಯ ಪ್ರಸಾದವಾದಲ್ಲಿ
ಅದು ಬಸವಣ್ಣನ ಪ್ರಸಾದವೆಂದು
ಆನು ಬಸವಣ್ಣನ ಕೂಡ ಆಡುತ್ತಿರ್ದೆನು
ರೇಕಣ್ಣ ಪ್ರಿಯ ನಾಗಿನಾಥ
ಬಸವಣ್ಣನಿಂದ ಬದುಕಿತೀ ಲೋಕವೆಲ್ಲ

**– ಬಹುರೂಪಿ ಚೌಡಯ್ಯ**

### ಎಲ್ಲರ ಹೃದಯ ಜ್ಯೋತಿ ಬಸವಣ್ಣ

ಎಲ್ಲಾ ಪುರಾತರ ಶ್ರೀ ಚರಣಕ್ಕೆ ಇಲ್ಲಿರ್ದೆ ಶರಣೆಂದರೆ ಸಾಲದೆ !
ಬಸವಾ, ಬಸವಪ್ಪಾ, ಬಸವಯ್ಯಾ ಶರಣೆಂದರೆ ಸಾಲದೆ ?
ಎಲ್ಲರ ಹೃದಯದಲ್ಲಿ ಜ್ಯೋತಿಯಂತೆ ಬೆಳಗುತಿಪ್ಪ
ಮಹಾಮಹಿಮನಾಗಿ, ಎನಗಿದೇ ದಿವ್ಯ ಮಂತ್ರ
ಬಸವ ಪ್ರಿಯ ಕೂಡಲಚನ್ನಸಂಗಯ್ಯನಲ್ಲಿ
ಬಸವಾ ಬಸವಾ ಬಸವಾ ಶರಣೆಂದರೆ ಸಾಲದೆ !

**– ಹಡಪದ ಅಪ್ಪಣ್ಣನವರು**

### ಬಸವಣ್ಣ ಕೊಟ್ಟ ಕಾಯಕ

ಭಾವ ಭ್ರಮೆವಂತರು ಬಾರದಿರಿ
ಜ್ಞಾನಹೀನರು ಬೇಗ ಹೋಗಿ
ತ್ರಿವಿಧಮಲಕ್ಕೆ ಕಚ್ಚಿ ಮುಟ್ಟಿ
ಹೊಡೆದಾಡುವರತ್ತಲಿರಿ
ನಿರುತ ಸ್ವಯಾನುಭಾವರು ಬನ್ನಿ
ಪರಬ್ರಹ್ಮ ಸ್ವರೂಪರು ಬನ್ನಿ
ಏಕಲಿಂಗ ನಿಷ್ಠಾಪರ ದೃಢವಂತರು ಬನ್ನಿ
ಸನ್ಮಾರ್ಗ ಸತ್ಕ್ರಿಯಾವಂತರು ಬನ್ನಿ
ಎಂದು ಎನಗೆ ಬಸವಣ್ಣ ಕೊಟ್ಟ ಕಾಯಕ
ಕೂಡಲಸಂಗಮದೇವರಲ್ಲಿ ಬಸವಣ್ಣ

**– ಉಗ್ಘಡಿಸುವ ಗಬ್ಬಿದೇವಯ್ಯಾ**

### ಸಂಗನಬಸವಣ್ಣ ಮಹಾಪುರುಷನು

ಶಿವ ಶಿವಾ, ಸಂಗನಬಸವಣ್ಣನು
ನಿರ್ವಂಚಕನು ನಿರಾಶಾಭರಿತನು, ಸುಚರಿತ್ರನು
ಸದ್ಭಕ್ತ ಪುರುಷನು, ಮಹಾಪುರುಷನು
ಎನಗೆ ಮಹಾ ಗುರು, ಲಿಂಗ, ಜಂಗಮ, ಪ್ರಸಾದ
ಈ ಚತುರ್ವಿಧವು ಬಸವಣ್ಣನು
ಈ ಬಸವಣ್ಣನ ಭೃತ್ಯರ ಭೃತ್ಯನಾಗಿ ಎನ್ನನಿರಿಸಯ್ಯಾ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

**– ಉರಿಲಿಂಗಪೆದ್ದಿಗಳು**

**ಸ್ವಯಂ ಜ್ಯೋತಿ ಬಸವಣ್ಣ**

ಹಮ್ಮು ಬಿಮ್ಮಳಿದ ಅನವರತ ಶಿವ ನೀನು !
ಎನ್ನ ಕರಸ್ಥಲದ ಕಳೆ ನೀನು !
ಎನ್ನ ಮನೋಮಧ್ಯದ ಸ್ವಯಂಜ್ಯೋತಿ ನೀನು
ಅಮರೇಶ್ವರಲಿಂಗದ ಅನುವಿನ ಕಳೆ ನೀನು
ಸಂಗನಬಸವಣ್ಣಾ

**– ಆಯ್ದಕ್ಕಿ ಮಾರಯ್ಯ**

**ನಿರಾಳ ಪ್ರಸನ್ನಮೂರ್ತಿ ಬಸವಯ್ಯ**

ಅಂಗದ ಸಂಗಿಗನಲ್ಲ ನಮ್ಮ ಬಸವಯ್ಯನು
ಪ್ರಾಣದ ಭ್ರಮೆಯವನಲ್ಲ ನಮ್ಮ ಬಸವಯ್ಯನು
ಉಭಯದ ಹಂಗ ಹರಿದು ಉಪಮಾತೀತನಾದ
ನಮ್ಮ ಬಸವಯ್ಯನು.
ಸಂಗಯ್ಯನಲ್ಲಿ ಕೂಡಿ
ನಿರಾಳ ಪ್ರಸನ್ನ ಮೂರ್ತಿಯಾದ ನಮ್ಮ ಬಸವಯ್ಯನು

**– ನೀಲಾಂಬಿಕೆ**

**ಆದಿ ನಿರಂಜನ ಬಸವಣ್ಣನು**

ಆದಿ ಅನಾದಿಗಳಿಂದತ್ತಲಯ್ಯಾ ಬಸವಣ್ಣನು
ಮೂದೇವರ ಮೂಲಸ್ಥಾನವಯ್ಯಾ ಬಸವಣ್ಣನು
ನಾದಬಿಂದು ಕಲಾತೀತ ಆದಿ ನಿರಂಜನನಯ್ಯಾ ಬಸವಣ್ಣನು
ಆ ಚಿನ್ನಾದ ಸ್ವರೂಪವೆ ಬಸವಣ್ಣನಾದ ಕಾರಣ
ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು
ಕಾಣಾ ಚೆನ್ನಮಲ್ಲಿಕಾರ್ಜುನಾ

**– ಅಕ್ಕಮಹಾದೇವಿ**

## ಪಂಚ ಪರುಷ ಮೂರ್ತಿ ಬಸವಣ್ಣ

ಬಸವಣ್ಣಾ ನೀವು ಮರ್ತ್ಯಕ್ಕೆ ಬಂದು ನಿಂದರೆ
ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತ್ತಯ್ಯಾ
ಸ್ವರ್ಗ ಮರ್ತ್ಯ ಪಾತಾಳದೊಳಗೆಲ್ಲಾ ನಿಮ್ಮ
ಭಕ್ತಿಯ ಬೆಳವಿಗೆಯ ಘನವನಾರು ಬಲ್ಲರೋ ಅಣ್ಣಾ !
ಶಶಿಧರನಟ್ಟಿದ ಮಣಿಹ ಪೂರೈಸಿತ್ತೆಂದು
ನೀವು ಲಿಂಗೈಕ್ಯವಾದರೆ,
ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯಾ !
ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯಾ !
ನಿಮ್ಮೊಡನೆ ಅಸಂಖ್ಯಾತರು ಹೋದರು ಅಣ್ಣಾ !
ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತು
ಬಸವಣ್ಣಾ !
ಎನ್ನನೊಯ್ಯದೆ ಹೋದೆಯಲ್ಲಾ
ಪಂಚಪರುಷಮೂರ್ತಿ ಬಸವಣ್ಣಾ !
ಬಸವಣ್ಣಪ್ರಿಯ ಚೆನ್ನಸಂಗಯ್ಯಂಗೆ
ಪ್ರಾಣಲಿಂಗವಾಗಿ ಹೋದೆಯಲ್ಲಾ ಸಂಗನಬಸವಣ್ಣಾ !

– **ಅಕ್ಕನಾಗಮ್ಮ**

### ಕಾಲಜ್ಞಾನ ವಚನ

ಬಸವಪೀಠವು ಎದ್ದು, ವಸೆದು ನಾಣ್ಯವು ಬೆಳಗೆ
ಬಸವನಾಮುದ್ರೆ ಮೆರೆದಾವು ಜಗ ಅವಗೆ
ವಶವಾಗದಿಹುದೆ ಸರ್ವಜ್ಞ॥

## ೧೦. ಗ್ರಂಥ ಋಣ :

೧) ಬಸವಣ್ಣನವರ ವಚನ ಸಂಪುಟ – ಸಂ. ಡಾ. ಎಂ. ಎಂ. ಕಲಬುರ್ಗಿ
೨) ಬಸವಣ್ಣನವರ ವಚನಗಳು – ಸಂ. ಡಾ. ಆರ್. ಸಿ. ಹಿರೇಮಠ
೩) ಬಸವಣ್ಣನವರ ವಚನಗಳು – ಸಂ. ಶಿ. ಶಿ. ಬಸವನಾಳ
೪) ಬಸವೇಶ್ವರರ ಸಮಕಾಲೀನರು – ಪ್ರ ಬಸವ ಸಮಿತಿ ಬೆಂಗಳೂರು
೫) ಶರಣರು ಕಂಡ ಬಸವಣ್ಣ – ಸಂ. ಎಚ್. ಡಿ. ಚಂದನಗೌಡರು
೬) ಶರಣ ಚರಿತಾಮೃತ – ಡಾ. ಸಿದ್ದಯ್ಯ ಪುರಾಣಿಕ
೭) ಶ್ರೀ ಬಸವೇಶ್ವರರು – ಪ್ರ. ಮೈಸೂರು ಸರಕಾರ ಬೆಂಗಳೂರು
೮) ಶಿವಶರಣೆಯರ ವಚನ ಸಂಪುಟ – ಸಂ. ಡಾ. ವೀರಣ್ಣ ರಾಜೂರ
೯) ಕನ್ನಡ ಜಾನಪದ ಗೀತೆಗಳು – ಡಾ. ಬಿ. ಎಸ್. ಗದ್ದಗಿಮಠ
೧೦) ವಚನ ಸಾಹಿತ್ಯ ಸಂಗ್ರಹ – ಸಂ. ಶ್ರೀ ಸಂ. ಶಿ. ಭೂಸನೂರಮಠ
೧೧) ಬಸವ ಚರಿತ್ರೆ – ಹರ್ಡೇಕರ ಮಂಜಪ್ಪ
೧೨) ಕಾಯಕ ವೀರ – ಶ್ರೀ ಲಕ್ಕಪ್ಪ ಶಿರಹಟ್ಟಿ
೧೩) ಬಸವಣ್ಣನವರ ಜೀವನ–ಸಂದೇಶ – ಡಾ. ಸಿದ್ದಯ್ಯ ಪುರಾಣಿಕ
೧೪) ಬಸವಣ್ಣನವರು – ಡಾ. ಎಂ. ಚಿದಾನಂದಮೂರ್ತಿ
೧೫) ಬಸವ ಸಂಹಿತೆ – ಡಾ. ದೇ. ಜವರೇಗೌಡರು
೧೬) ನೀಲಾಂಬಿಕೆ – ಪ್ರೊ. ಎಸ್. ಎಸ್. ಭೂಸರಡ್ಡಿ
೧೭) ವಿಶ್ವಮಯ ಬಸವಣ್ಣ – ಬಸವ ನವಲಿಂಗ ಶರಣರು
೧೮) ಬಸವೇಶ್ವರ – ಡಾ. ಗುರುಲಿಂಗ ಕಾಪಸೆ
೧೯) ಲಿಂಗಾಯತ ಧರ್ಮ ಸಮಾಜ ತತ್ವಜ್ಞಾನ– ಸಿದ್ಧಣ್ಣ ಲಂಗೋಟಿ
೨೦) ದೀನಬಂಧು ಬಸವಣ್ಣ – ಕೋ. ಚೆನ್ನಬಸಪ್ಪ
೨೧) ಸಮಗ್ರ ವಚನ ಸಂಪುಟಗಳು – ಕರ್ನಾಟಕ ಸರಕಾರ
೨೨) ಜಗಜ್ಯೋತಿ ಬಸವಣ್ಣನವರು (ಮಕ್ಕಳ ಸಾಹಿತ್ಯ) – ಸಿದ್ಧಣ್ಣ ಲಂಗೋಟಿ
೨೩) ವಚನಶಾಸ್ತ್ರ ಸಾರ– ಭಾಗ ೧, ೨, ೩ – ಡಾ. ಫ. ಗು. ಹಳಕಟ್ಟಿ
೨೪) ಕರ್ತಾರನ ಕಮ್ಮಟ – ಡಾ. ಹೆಚ್. ತಿಪ್ಪೆರುದ್ರಸ್ವಾಮಿ
೨೫) ಅಮರ ಬಸವಣ್ಣ – ಜಿ. ಎಂ. ಪಾಟೀಲ
೨೬) ಮಾನವತಾವಾದಿ ಬಸವಣ್ಣನವರು – ಚಂದ್ರಶೇಖರ ವಸ್ತ್ರದ
೨೭) ಬಸವಣ್ಣನವರ ಕೊನೆಯ ದಿನಗಳು – ಡಾ. ಗಂಗಮ್ಮ ಸತ್ಯಂಪೇಟೆ

## ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಕೃತಿಗಳು

| | | |
|---|---|---|
| ೧. | ಅಲ್ಲಮಪ್ರಭುದೇವರ ಜೀವನ ಸಂದೇಶ | ೧೯೭೯ |
| ೨. | ಅಕ್ಕಮಹಾದೇವಿಯ ಜೀವನ ದರ್ಶನ | ೧೯೭೯ |
| ೩. | ಲಿಂಗಾಯತ ಧರ್ಮ ಸಮಾಜ ತತ್ವಜ್ಞಾನ | ೧೯೭೯ |
| ೪. | ಲಿಂಗಾಯತ ಧರ್ಮದ ಮೂಲತತ್ವಗಳು | ೧೯೭೯ |
| ೫. | ಶಿವಯೋಗಿಣಿ ಅಕ್ಕನಾಗಮ್ಮ (ಸಂಪಾದಿತ) | ೧೯೭೯ |
| ೬ | ಗಣನಾಯಕ ಮಡಿವಾಳ ಮಾಚಿದೇವರು | ೧೯೭೯ |
| ೭ | ಮರಣವೇ ಮಹಾನವಮಿ | ೧೯೮೦ |
| ೮. | ಷಟಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರು | ೧೯೮೦ |
| ೯. | ಬಸವಬೆಳಗು (ಸಂಪಾದಿತ) | ೧೯೮೦ |
| ೧೦. | ಪ್ರಭುವಿನ ವಾಣಿಯಲ್ಲಿ ಬಸವಣ್ಣನವರು | ೧೯೮೦ |
| ೧೧. | ವಚನ ಸಂಶೋಧನ ಪಿತಾಮಹ ಫ.ಗು. ಹಳಕಟ್ಟಿಯವರು | ೧೯೮೧ |
| ೧೨. | ಬಸವಣ್ಣನವರ ಬಯ್ಗುಳಗಳು | ೧೯೮೧ |
| ೧೩. | ಅಕ್ಕ ಕಂಡ ಅಣ್ಣ | ೧೯೮೧ |
| ೧೪. | ಅಂಬಿಗರ ಚೌಡಯ್ಯ | ೧೯೮೧ |
| ೧೫. | ಶರಣರ ಶಿವರಾತ್ರಿ | ೧೯೮೨ |
| ೧೬. | ಸ್ವಾಮಿ ವಿವೇಕಾನಂದರ ದೇಶಭಕ್ತಿ ಕಲ್ಪನೆ | ೧೯೮೨ |
| ೧೭. | ಬಸವಾದಿ ಶರಣರ ವಚನಾಮೃತ (ಸಂಪಾದಿತ) | ೧೯೮೩ |
| ೧೮. | ವಿಭೂತಿ ನಿರ್ಮಾಣ ವಿಧಾನ | ೧೯೮೪ |
| ೧೯. | ಬಾಚಿಕಾಯಕದ ಬಸವಪ್ಪ ಕಾಳವ್ವೆ | ೧೯೮೪ |
| ೨೦. | ಶರಣರು ಹಾಗೂ ಮೂಢನಂಬಿಕೆಗಳು | ೧೯೮೪ |
| ೨೧. | ಇಷ್ಟಲಿಂಗ ನಿರ್ಮಾಣ ವಿಧಾನ | ೧೯೮೫ |
| ೨೨. | ಹಡಪದ ಅಪ್ಪಣ್ಣ ಲಿಂಗಮ್ಮ | ೧೯೮೫ |
| ೨೩. | ಶ್ರೀ ಗುರುಸಿದ್ಧ ಪ್ರಭುದೇವರು | ೧೯೮೫ |
| ೨೪. | ಇಷ್ಟಲಿಂಗ ಪೂಜಾ ವಿಧಾನ | ೧೯೮೫ |
| ೨೫. | ಫಕ್ಕೀರಪ್ಪ ಮುರಗೋಡ ಮಾಸ್ತರು | ೧೯೮೫ |
| ೨೬. | ಶಿವಶರಣರ ಕ್ರಾಂತಿ (ಕ.ವಿ.ವಿ. ಪ್ರಕಟಣೆ) | ೧೯೮೬ |
| ೨೭ | ವಿಶ್ವಗುರು ಬಸವಣ್ಣನವರ ವಚನಗಳು (ಸಂಪಾದಿತ) | ೧೯೮೬ |
| ೨೮. | ಕರ್ನಾಟಕ ಗಾಂಧಿ ಹರ್ಡೇಕರ ಮಂಜಪ್ಪನವರು | ೧೯೮೬ |
| ೨೯. | ಯುಗ ಪುರುಷ ಚೆನ್ನಬಸವ ಪಟ್ಟಾಧ್ಯಕ್ಷರು | ೧೯೮೭ |
| ೩೦. | ಬಸವದರ್ಶನ (ಸಂಪಾದಿತ) | ೧೯೮೭ |
| ೩೧. | ವಚನಸಾಹಿತ್ಯ : ತಾತ್ವಿಕ ವಿವೇಚನೆ | ೧೯೮೭ |
| ೩೨. | ವಿಶ್ವವಿಖ್ಯಾತ ತತ್ವಜ್ಞಾನಿ ಡಾ. ರಾಧಾಕೃಷ್ಣನ್‌ರು | ೧೯೮೮ |
| ೩೩ | ಧರ್ಮಗುರು ಜಗಜ್ಯೋತಿ ಬಸವಣ್ಣನವರು | ೧೯೮೮ |
| ೩೪. | ಅಲ್ಲಮ ಪ್ರಭುದೇವರ ವಚನಗಳು (ಸಂಪಾದಿತ) | ೧೯೮೯ |
| ೩೫. | ಬಸವಣ್ಣನವರು ಮತ್ತು ಜಾಗತಿಕ ಶಾಂತಿ | ೧೯೮೯ |
| ೩೬ | ಬಸವಭಕ್ತ ಘನಮಠ ಶಿವಯೋಗಿಗಳು | ೧೯೮೯ |
| ೩೭ | ಚೆನ್ನಬಸವಣ್ಣನವರ ವಚನಗಳು (ಸಂಪಾದಿತ) | ೧೯೮೯ |
| ೩೮. | ಬಸವಭಕ್ತ ಅಥಣಿ ಶಿವಯೋಗಿಗಳು | ೧೯೮೯ |
| ೩೯. | ದೇವದಾಸಿ ಪದ್ಧತಿ ವಿಮೋಚನೆ ಹಾಗೂ ಬಸವಣ್ಣನವರು | ೧೯೮೯ |
| ೪೦. | ಸಿದ್ಧರಾಮೇಶ್ವರ ವಚನಗಳು (ಸಂಪಾದಿತ) | ೧೯೯೦ |
| ೪೧. | ಡಾ. ಜಚನಿ ಅಂದು–ಇಂದು : ಒಂದು ವಿಮರ್ಶೆ | ೧೯೯೦ |
| ೪೨. | ಶ್ರೀ ಗುರುಬಸವ ಮಂಟಪ ನಡೆದು ಬಂದ ದಾರಿ | ೧೯೯೧ |



ಪ್ರೊ. ಸಿದ್ಧಣ್ಣ ಲಂಗೋಟಿ ಅವರು ಬಸವಭೂಮಿಯಾದ ವಿಜಯಪುರ ಜಿಲ್ಲೆಯ ಸಿಂದಗಿ ತಾಲೂಕಿನ ಚಾಂದಕವಠೆ ಗ್ರಾಮದ ಲಿಂಗಾಯತ ಕೃಷಿ ಕುಟುಂಬದಲ್ಲಿ ಜನಿಸಿ (೧೯೫೧). ಚಾಂದಕವಠೆ, ಕನ್ನೊಳ್ಳಿ ಗ್ರಾಮಗಳಲ್ಲಿ ಪ್ರಾಥಮಿಕ ಶಿಕ್ಷಣ, ಸಿಂದಗಿಯ ಎಚ್.ಜಿ. ಹೈಸ್ಕೂಲದಲ್ಲಿ ಮಾಧ್ಯಮಿಕ ಶಿಕ್ಷಣ, ವಿಜಯಪುರ ಬಿ.ಎಲ್.ಡಿ.ಇ. ಸಂಸ್ಥೆಯಲ್ಲಿ ಬಿ.ಎಸ್‌ಸಿ. ಪದವಿ ಶಿಕ್ಷಣ, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ತತ್ವಜ್ಞಾನ, ಎಂ.ಎ. ಹಿಂದಿ, ಎಂ.ಎ. ಕನ್ನಡ, ಎಲ್.ಎಲ್‌ಬಿ. ಕಾನೂನು ಶಿಕ್ಷಣ, ಸಿ ವಾಯ್, ಇಡಿ ಯೋಗ ಶಿಕ್ಷಣ ಪಡೆದವರಾಗಿದ್ದಾರೆ.

ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದು, ಸಾಹಿತ್ಯ ಕೃಷಿಕೈಕೊಂಡಿದ್ದಾರೆ. ಭಾರತೀಯ ಹಾಗೂ ಪಾಶ್ಚಿಮಾತ್ಯ ತತ್ವಜ್ಞಾನ ಚಿಂತಕರೂ, ಬಸವತತ್ವಜ್ಞಾನದ ಅನುಭಾವಿ ಲೇಖಕರೂ ಆಗಿರುವ ಸಿದ್ಧಣ್ಣ ಲಂಗೋಟಿಯವರು ೮೫ ಕ್ಕೂ ಮಿಕ್ಕಿ ಗ್ರಂಥಗಳ ರಚನೆ ಹಾಗೂ ಸಂಪಾದನೆ ಮಾಡಿದ್ದಾರೆ.

ಕ್ರಿ.ಶ. ೧೯೯೦ ರಲ್ಲಿ ಹಾಗೂ ಕ್ರಿ.ಶ. ೨೦೦೦ ಇಸ್ವಿಯಲ್ಲಿ ಪಾಶ್ಚಿಮಾತ್ಯ ಹಾಗೂ ಪ್ರಪಂಚದ ಪ್ರಮುಖ ದೇಶಗಳಾದ ಇಂಗ್ಲಂಡ, ಅಮೇರಿಕಾ, ಪ್ರಾನ್ಸ್, ಇಟಲಿ, ಜರ್ಮನಿ, ಕೆನಡಾ, ಆಸ್ಟ್ರಿಯಾ, ಹಾಲಂಡ, ಸಿಂಗಾಪುರ, ಅರಬ ರಾಷ್ಟ್ರಗಳ ಪ್ರವಾಸ ಕೈಕೊಂಡು ಬಸವತತ್ವಜ್ಞಾನ ಕುರಿತು ಉಪನ್ಯಾಸ ನೀಡಿ, ಬಸವ ತತ್ವ ಪ್ರಸಾರಗೈದು ಬಂದಿದ್ದಾರೆ.

೧೯೭೭ ರಲ್ಲಿ ಬಸವತತ್ವ ಪ್ರಸಾರ ಸಂಸ್ಥೆ ಸ್ಥಾಪಿಸಿ ಶರಣ ಫ.ಗು. ಹಳಕಟ್ಟಿಯವರ ಶಿವಾನುಭವ ಪತ್ರಿಕೆಗೆ ಮರುಜನ್ಮ ನೀಡಿದ್ದಾರೆ. ೧೯೮೬ ರಲ್ಲಿ ಹರ್ಡೇಕರ ಮಂಜಪ್ಪನವರ ಶತಮಾನೋತ್ಸವ ಆಚರಿಸಿ 'ಶರಣಸಂದೇಶ'ವನ್ನು 'ಬಸವಬೆಳಗು' ಹೆಸರಿನಲ್ಲಿ ಮರುಹುಟ್ಟಿಗೆ ಕಾರಣೀಕರ್ತರಾಗಿದ್ದಾರೆ. ೧೯೯೦ ರಲ್ಲಿ ಇಂಗ್ಲೆಂಡಿನಲ್ಲಿ 'ಬಸವ ಇಂಟರನ್ಯಾಶನಲ್ ಫೌಂಡೇಶನ್' ಪ್ರಾರಂಭಿಸಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಚಿತ್ತರಗಿಯಲ್ಲಿ ೧೯೯೬ರಲ್ಲಿ ಬಸವಕೇಂದ್ರ ಸ್ಥಾಪಿಸಿದ್ದಾರೆ. ಇಳಕಲ್ಲ ಶರಣ ಸಿದ್ಧಾಂತ ವಿದ್ಯಾಪೀಠದ ಸಂಚಾಲಕರಾಗಿ ४೨ ವರುಷಗಳಿಂದ ಶಿವಾನುಭವ ಶಿಬಿರಗಳನ್ನು ಸಂಘಟಿಸಿದ್ದಾರೆ. 'ಜಗಜ್ಯೋತಿ ಬಸವೇಶ್ವರ' ವಚನಾಂಕಿತದಲ್ಲಿ ಸಾವಿರಾರು ವಚನಗಳನ್ನು ಬರೆದು ಆಧುನಿಕ ವಚನಕಾರರಲ್ಲಿ ಒಬ್ಬರಾಗಿದ್ದಾರೆ.

–ಅಂಬಿಗರ ಕುಮಾರಚೌಡಯ್ಯ,
ಆಧುನಿಕ ವಚನಕಾರರು